ತಿರುಮಲೆಯಾರ್ಯ ಮಹಾಕವಿ ಪ್ರಣೀತಂ

# ಚಿಕದೇವರಾಯ ವಂಶಾವಳಿ

**ಎಂಬ ಗದ್ಯಕಾವ್ಯಂ**



ಪರಿಷ್ಕೃತ ತೃತೀಯ ಮುದ್ರಣಂ

ಕರ್ಣಾಟಕ ಕಾವ್ಯಮಂಜರಿಯ ಮತ್ತು ಕಾವ್ಯಕಲಾನಿಧಿಯ

ಪ್ರವರ್ತಕರೂ ಪ್ರೊಪ್ರೈಟರೂ ಆದ

**ಮಂ॥ ಅ॥ ರಾಮಾನುಜಯ್ಯಂಗಾರ್ಯರಿಂದ**

ಕವಿಚರಿತ್ರೆ, ಗ್ರಂಥವಿಷಯ, ಮುಂತಾದುವುಗಳೊಡನೆ

ಮೈಸೂರು

ಜಿ.ಟಿ.ಎ. ಪ್ರೆಸ್ಸಿನಲ್ಲಿ ಮುದ್ರಿತವಾಗಿ ಪ್ರಕಟಿಸಲ್ಪಟ್ಟಿದೆ.

೧೯೩೩.

**ಬೆಲೆ ೨—೦—೦**

# ಉಪೋದ್ಘಾತ

ಈ ಗದ್ಯಕಾವ್ಯವು ನಮ್ಮ ಮೈಸೂರು ಶ್ರೀಮನ್ ಮಹಾರಾಜರವರ ಹಿರಿಯರ ಚರಿತ್ರವನ್ನು ಬಲುಮಟ್ಟಿಗೆ ತಿಳಿಸುತ್ತದೆ. ಇದನ್ನು ಚಿಕದೇವರಾಜ ಒಡೆಯರ ಮುಖ್ಯಮಂತ್ರಿಗಳಾದ ತಿರುಮಲೈಯಂಗಾರ್ಯ ಎಂಬ ನಾಮಾಂಕಿತವುಳ್ಳ ತಿರುಮಲೆಯಾರ್ಯನು ಸುಮಾರು ಕ್ರಿ. ಶ. ೧೬೭೦ರಲ್ಲಿ ಬರೆದಂತೆ ತೋರುತ್ತದೆ. ಇದರಲ್ಲಿ ಕಾವ್ಯಪರಿಪಾಟಿಯ ವರ್ಣನೆಯ ಭಾಗಗಳನ್ನು ಬಿಟ್ಟರೆ, ಉಳಿದ ಭಾಗಗಳೆಲ್ಲವೂ ನಿಜವಾದ ಚರಿತ್ರ ವೃತ್ತಾಂತಗಳೇ ಆಗಿವೆ. ಇದರಲ್ಲಿ ಹೇಳಿರುವ ಚರಿತ್ರಾಂಶಗಳಿಗೂ ಈಗ ಪ್ರಕಟಿತವಾಗಿ ಪ್ರಸಿದ್ಧವಾಗಿರುವ* ಹಲವು ಮೈಸೂರು ದೊರೆಗಳ ಚರಿತ್ರಗಳಲ್ಲಿ ಹೇಳಿರುವ ಚರಿತ್ರಾಂಶಗಳಿಗೂ ಈ ಗ್ರಂಥದಲ್ಲಿ ಹೇಳಿರುವವುಗಳಿಗೂ ವ್ಯತ್ಯಾಸವಿವೆ. ಮುಖ್ಯವಾಗಿ ರಾಜಒಡೆಯರಿಗೆ ಶ್ರೀರಂಗಪಟ್ಟಣವು ಸೇರಿದ ವಿಚಾರ, ಮಹಾರಾಜರ ವಂಶವೃಕ್ಷ, ಪಟ್ಟದ ಕ್ರಮ, ಮೂಲಪುರುಷರ ವಿಷಯ—ಇವುಗಳಲ್ಲಿ ಭೇದಗಳಿವೆ. ಪ್ರಸಿದ್ಧವಾದ ಚರಿತ್ರೆಗಳಲ್ಲಿ ಹೇಳಿರುವುದಕ್ಕೆ ಅನುಸಾರವಾಗಿರುವುದನ್ನು ನಂಬಿ, ವಿರುದ್ಧವಾಗಿರುವುದನ್ನು ತಪ್ಪೆಂದು ಊಹಿಸುವುದು ಸಹಜವಾಗಿದೆ. ಶಾಸನಗಳ ಮತ್ತು ಇತರ ಆಧಾರಗಳ

---

* 1. ವಿಲ್ಕ್ಸ್ ಹಿಸ್ಟರಿ ಆಫ್ ಮೈಸೂರು ; 2. ಮುಮ್ಮಡಿ ಕೃಷ್ಣರಾಜ ಒಡೆಯರ್ ಕಾಲದಲ್ಲಿ ಆಸ್ಥಾನ ವಿದ್ವಾಂಸರಿಂದ ಬರೆಯಲ್ಪಟ್ಟು ಚಾಮರಾಜೇಂದ್ರ ಒಡೆಯರ ಕಾಲದಲ್ಲಿ ಮುದ್ರಿತವಾದ ವಂಶರತ್ನಾಕರ ; 3. ಮೈಸೂರು ಗೆಸ್ಸಿಟಿಯರ್ ; 4. ಸನ್ 1893ರಲ್ಲಿ ಮುದ್ರಿತವಾದ ಎಂ. ಏ. ಶ್ಯಾಮರಾಯರ ಹಿಸ್ಟರಿ ಇತ್ಯಾದಿ.

ಬಲದಿಂದ ಚೆನ್ನಾಗಿ ವಿಮರ್ಶೆಮಾಡಿ ನೋಡಿದರೆ, ಈ ಗ್ರಂಥದಲ್ಲಿ ಹೇಳಿರುವುದೇ ನಂಬಿಕೆಗೆ ಅರ್ಹವಾದುದೆಂದೂ, ಸಮಂಜಸವೆಂದೂ ಸ್ಥಿರಪಡಿಸಬಹುದು. ಅಂಥ ವಿಮರ್ಶೆಗಳಿಗೆ ಈ ಮುದ್ರಣದಲ್ಲಿ ಅವಕಾಶಕೊಡಲು ಸಾಧ್ಯವಿಲ್ಲವಾದುದರಿಂದ, ಅದನ್ನು ವಿಮರ್ಶಾಕಾರರಿಗೆ ಬಿಟ್ಟಿರುತ್ತೇನೆ.

ಈ ಕಾವ್ಯದ ಮಹತ್ವವನ್ನು ವಿಸ್ತರಿಸಿ ಹೇಳಬೇಕಾಗಿಲ್ಲ. ಸಕೃತ್ಪರಿಚಯದಿಂದಲೇ ಗೊತ್ತಾಗುತ್ತದೆ. ಕವಿತಾಶಕ್ತಿಯ ಮಹತ್ವಕ್ಕೆ ನಿದರ್ಶಕವಾದ ವರ್ಣನಾವೈಖರಿಗಳನ್ನು ಗ್ರಂಥಸ್ಥವಿಷಯಾನುಕ್ರಮಣಿಕೆಯಿಂದ ತಿಳಿಯಬಹುದು. ಮತಸಂಬಂಧಪಟ್ಟ ಗೂಢವಾದ ವಿಷಯಗಳನ್ನು ಸುಲಭವಾಗಿ ಅವಗಾಹನೆಗೆ ತರುವ ದೃಷ್ಟಿಯಿಂದ ಅವುಗಳನ್ನು ಉಚಿತಸ್ಥಾನಗಳಲ್ಲಿ ವರ್ಣನೆಯ ಮೂಲಕ ತಂದು ವ್ಯಕ್ತಗೊಳಿಸಿರುವುದು ಗ್ರಂಥದ ವಿಷಯಕ್ಕೂ, ಸಾಹಿತ್ಯ ಸೌಂದರ್ಯಕ್ಕೂ, ಕವಿಯ ಮಹತ್ವಕ್ಕೂ ಸಾಕಾದ ದೃಷ್ಟಾಂತವಾಗಿದೆ. ನೋಡಿದುದರಲ್ಲಿ ಈ ಕವಿಯಷ್ಟು ಸಂಸ್ಕೃತನೂ ಶಕ್ತನೂ ಬಹುಶಃ ಯಾರೂ ಇಲ್ಲವೆಂದು ನನ್ನ ಅಭಿಪ್ರಾಯ. ಈ ಕವಿಯ ಕಾಲದಲ್ಲಿದ್ದ ಕವಿಗಳಲ್ಲೂ ಈತನೇ ಅಗ್ರಗಣ್ಯನು.

ಈ ಮುದ್ರಣದಲ್ಲಿ ನಾನು ಅಲ್ಲಲ್ಲಿ ವಿಷಯವಿವರಣಗಳನ್ನು ಹೊಸದಾಗಿ ಬರೆದು ಸೇರಿಸಿದ್ದೇನೆ. ಅವು ಮೂಲಮಾತೃಕೆಗಳಲ್ಲಿಲ್ಲ.

15—6—33 ಮಂ. ಅ. ರಾಮಾನುಜಯ್ಯಂಗಾರ್.

———

# ಕವಿಚರಿತ್ರೆ

ಈ ಗ್ರಂಥಕರ್ತನ ಹೆಸರು ತಿರುಮಲಾರ್ಯನು ಅಥವಾ ತಿರುಮಲೆಯಾರ್ಯನು. ಈತನಿಗೆ ತಿರುಮಲೈಯಂಗಾರ್ಯನೆಂದೂ ಹೆಸರುಂಟು. ಈತನ ತಂದೆ ಮೈಸೂರು ಮಹಾರಾಜ ದೊಡ್ಡದೇವರಾಜನಿಗೆ ಸ್ನೇಹಿತನಾಗಿಯೂ, ಪೌರಾಣಿಕನಾಗಿಯೂ ಇದ್ದ ಅಳಹಿಯ ಸಿಂಗರಾರ್ಯನು.[1] ಈತನ ತಾಯಿ ಮೈಸೂರು ಮಹಾರಾಜ ಕಂಠೀರವನರಸರಾಜನ ಪ್ರಧಾನಿಯಾದ ಗೋವಿಂದರಾಜಯ್ಯನೆಂದು ನಾಮಾಂತರವುಳ್ಳ ಅಪ್ಪಾಜಯ್ಯನ ಮಗಳು ಸಿಂಗಮ್ಮನು.[2] ಈ ಕವಿಯು ಕ್ರಿ. ಶ. ೧೬೪೫ಕ್ಕೆ ಸರಿಯಾದ ಪಾರ್ಥಿವಸಂವತ್ಸರದ ಆಶ್ವಯುಜದಲ್ಲಿ ಶ್ರೀರಂಗಪಟ್ಟಣದಲ್ಲಿ ಜನಿಸಿದನು.[3] ಈತನು ಚಿಕದೇವಮಹಾರಾಜನೊಡನೆ ಬೆಳೆದು, ಆತನಿಗೆ ಮಿತ್ರನಾಗಿ ವಿದ್ಯಾಭ್ಯಾಸವನ್ನು ಮಾಡಿದನೆಂದು ತಿಳಿದುಬರುತ್ತದೆ.[4]

ಮೈಸೂರು ಮಹಾರಾಜನಾದ ದೊಡ್ಡದೇವರಾಜನು ಈತನಿಗೂ, ಈತನ ತಂದೆಯಾದ ಅಳಹಿಯ ಸಿಂಗರಾರ್ಯನಿಗೂ ಶಿಂಗಮಾರನಹಳ್ಳಿ ಮೊದಲಾದ ಗ್ರಾಮಗಳನ್ನು ಸರ್ವಮಾನ್ಯನಾಗಿ ಕೊಟ್ಟಂತೆ ತಿಳಿಯುಬರುತ್ತದೆ.[5] ಈ ಕವಿಯು ಮೈಸೂರು ರಾಜ್ಯದ ಮಂತ್ರಿತ್ವವನ್ನು ವಹಿಸುವುದಕ್ಕೆ ಮುಂಚೆ "ಅಶೇಷತಂತ್ರಸ್ವತಂತ್ರನೆನಿಸಿ" ಆಸ್ಥಾನಪಂಡಿತನಾಗಿದ್ದು, ಸಂಸ್ಕೃತ ಕರ್ಣಾಟಕ ಭಾಷೆಗಳಲ್ಲಿ ಅನೇಕ ಕಾವ್ಯಗಳನ್ನು

---

[1] ಚಿಕದೇವರಾಜವಿಜಯ—ಆಶ್ವಾಸ ೩—೭೧, ೧೨೨; ೪—೧೯, ೧೭೦.

[2] ನರಪತಿವಿಜಯ ; ಚಿಕದೇವರಾಯ ವಂಶಾವಳಿ—ಪು. ೧೬೩.

[3] ಚಿಕದೇವರಾಯ ವಂಶಾವಳಿ—ಪು. ೧೩೧—೨.

[4] ಚಿಕದೇವರಾಜವಿಜಯಂ—ಆ. ೪—೮೭, ೯೧, ೯೩.

[5] ಶ್ರೀರಂಗಪಟ್ಟಣ—೯೪ನೆಯ ಶಾಸನ ; ಮೈಸೂರು ಶಾಸನ—೭.

ರಚಿಸಿದ್ದಾನೆ.[6] ಆ ಗ್ರಂಥಗಳ ವಿವರವು ಮುಂದೆ ತಿಳಿಸಲ್ಪಡುವುದು.

ಚಿಕ್ಕದೇವಮಹಾರಾಜನು ಕ್ರಿ. ಶ. ೧೬೭೨ರಲ್ಲಿ ಪಟ್ಟಾಭಿಷಿಕ್ತನಾಗಿ ಶ್ರೀರಂಗಪಟ್ಟಣದಲ್ಲಿ ರಾಜ್ಯಭಾರವನ್ನು ಮಾಡುತ್ತಿರುವಲ್ಲಿ—ಅವನ ಮಂತ್ರಿಯಾದ ಎಳವಂದೂರು ವಿಶಾಲಾಕ್ಷಪಂಡಿತನನ್ನು ಕ್ರಿ. ಶ. ೧೬೮೬ರಲ್ಲಿ ಲಿಂಗವಂತರು ಕೊಂದುಹಾಕಿದರು. ಆಗ ದೊರೆಯು ಪ್ರಧಾನಿಯಾದ ಅಪ್ಪಾಜಯ್ಯನನ್ನು ಕರೆಯಿಸಿ, ಸಂಸ್ಥಾನದ ಮಂತ್ರಿತ್ವವನ್ನು ವಹಿಸ ಹೇಳಿದನು. ಅದಕ್ಕೆ ಅವನು—ರಾಜನೀತಿವಿಶಾರದನಾಗಿಯೂ ಆಸ್ಥಾನಪಂಡಿತನಾಗಿಯೂ ಇರುವ ತನ್ನ ದೌಹಿತ್ರನಾದ ತಿರುಮಲೈಯಂಗಾರ್ಯನು ಆ ಮಂತ್ರಿತ್ವಕ್ಕೆ ಸಮರ್ಥನೆಂದು ಅರಿಕೆ ಮಾಡಲು—ಈತನಿಗೆ ಮಂತ್ರಿತ್ವವನ್ನು ಕೊಟ್ಟಂತೆ ತಿಳಿಯಬರುತ್ತದೆ.[7] ಆಗ ಈತನಿಗೆ ೩೯ ವಯಸ್ಸು. ಈತನು ಕೆಲವು ಕಾಲ ಮಂತ್ರಿಪದವಿಯನ್ನಲಂಕರಿಸಿದ್ದು ಬಳಿಕ ಕ್ರಿ. ಶ. ೧೬೯೫ರಲ್ಲಿ ಮಹಾರಾಜನ ಅಪ್ಪಣೆಯನ್ನು ತೆಗೆದುಕೊಂಡು ಶ್ರೀರಂಗಾದಿ ಸ್ಥಲಕ್ಕೆ ಯಾತ್ರೆಹೋದಂತೆಯೂ, ಆ ಕಾಲದಲ್ಲಿ ಮಧುರೆಯ ನಾಯಕನ ಹೆಂಡತಿ ಮಂಗಮ್ಮನೆಂಬವಳು ಈತನಿಗೆ ಗ್ರಾಮಾದಿಗಳನ್ನು ಕೊಟ್ಟು ತನ್ನಲ್ಲೇ ಇರುವಂತೆ ಕೇಳಿಕೊಂಡುದರಿಂದ ಸ್ವಲ್ಪ ಕಾಲ ಅಲ್ಲೇ ನಿಂತಂತೆಯೂ,[8] ಈ ಸಮಾಚಾರವನ್ನು ತಿಳಿದು ಅಲ್ಲಿನ ಮಂತ್ರಿತ್ವವನ್ನು ವಹಿಸುವನೆಂಬ ಶಂಕೆಯಿಂದ ಚಿಕ್ಕದೇವಮಹಾರಾಜನು ಒಂದು ನಿರೂಪವನ್ನು ಬರೆದು ಕರೆಯಕಳುಹಿಸಲು ; ತಿರುಮಲೈಯಂಗಾರ್ಯನು ಪುನಃ

---

[6] ತಿರುಮಕೂಡ್ಲು ತಾಲ್ಲೋಕು ೭೩ನೆಯ ಶಾಸನವನ್ನು ಶಾ. ಶ. ೧೫೮೬ ರಲ್ಲಿ (ಕ್ರಿ. ಶ. ೧೬೬೪) ತಿರುಮಲೈಯಂಗಾರ್ಯನು ಬರೆದಿರುತ್ತಾನೆ. ಮತ್ತು ಮಿತ್ರವಿಂದಾಗೋವಿಂದ ಪು. ೪, ೫. ಅಪ್ರತಿಮವೀರಚರಿತಂ—ಪು.೩, ಪದ್ಯ—೧೧,.೧೨ಗಳನ್ನು ನೋಡಿ.

[7] ನರಪತಿವಿಜಯಂ.

[8] ಮಧುರೆ ಮಂಗಮ್ಮನ ಭೂದಾನಶಾಸನ—ಶ. ಕ. ೧೬೧೭.

ಶ್ರೀರಂಗಪಟ್ಟಣಕ್ಕೆ ಕ್ರಿ. ಶ. ೧೬೯೮ ರಲ್ಲಿ ಬಂದು ಮಂತ್ರಿತ್ವವನ್ನು ವಹಿಸಿದಂತೆಯೂ[9] ತಿಳಿಯಬರುತ್ತದೆ.

ಚಿಕ್ಕದೇವಮಹಾರಾಜನು ತನ್ನ ಅವಸಾನಕಾಲದಲ್ಲಿ ಎಂದರೆ ಕ್ರಿ.ಶ. ೧೭೦೪ನೆಯ ತಾರಣಸಂವತ್ಸರದಲ್ಲಿ ಮಂತ್ರಿ ತಿರುಮಲೈಯಂಗಾರ್ಯನನ್ನೂ, ಪ್ರಧಾನಿ ಅಪ್ಪಾಜೈಯನನ್ನೂ ಬರಿಸಿ ತನ್ನ ಮಗನನ್ನೂ ರಾಜ್ಯವನ್ನೂ ನೋಡಿಕೊಳ್ಳುವಂತೆ ಹೇಳಿ, ಅವರಿಗೆ ರಾಜ್ಯದ ಸರ್ವಾಧಿಕಾರವನ್ನು ಕೊಟ್ಟಂತೆಯೂ, ಬಳಿಕ ಮಂತ್ರಿ ಪ್ರಧಾನಿಗಳು ಕಂಠೀರವ ನರಸರಾಜ ಒಡೆಯನಿಗೆ ಪಟ್ಟವನ್ನು ಕಟ್ಟಿ ತಾವೇ ರಾಜ್ಯದ ಆಡಳಿತವನ್ನು ನೋಡುತ್ತಿದ್ದಂತೆಯೂ[10] ತಿಳಿಯಬರುತ್ತದೆ.

ಕ್ರಿ. ಶ. ೧೭೦೬ ರಲ್ಲಿ ತಿರುಮಲೈಯಂಗಾರ್ಯನು ಮೃತನಾದನೆಂದು ಗೊತ್ತಾಗುತ್ತದೆ. ಈತನ ಮಂತ್ರಿತ್ವದ ಶಕ್ತಿಯನ್ನು ಚಿಕ್ಕದೇವಮಹಾರಾಜನ ರಾಜ್ಯಸ್ಥಿತಿಯೇ ತಿಳಿಸುತ್ತದೆ. ಈತನ ರಾಜತಂತ್ರದ ಧುರೀಣತೆಯನ್ನು ಈತನ ಕಾಲದ ಮೈಸೂರು ಚರಿತ್ರೆಯಿಂದ ತಿಳಿಯಬಹುದು. ಚಿಕದೇವರಾಯನ ಆಳ್ವಿಕೆಯ ಮಹತ್ವಕ್ಕೆ ಈತನೇ ಮೂಲಕಾರಣನೆಂದು ಹೇಳಬಹುದು. ಈ ಉಪೋದ್ಘಾತವು ಕವಿಯ ಕವಿತಾಸಾಮರ್ಥ್ಯಪ್ರದರ್ಶಕವಾದುದರಿಂದ ಮಂತ್ರಿತ್ವದ ಮಹಿಮೆಯನ್ನು ವಿಸ್ತರಿಸಿ ಹೇಳಲು ಇಲ್ಲಿ ಅವಕಾಶವನ್ನು ತೆಗೆದುಕೊಳ್ಳಲಿಲ್ಲ.

ಈತನು ಸಂಸ್ಕೃತದಲ್ಲಿಯೂ ಕನ್ನಡದಲ್ಲಿಯೂ ಉದ್ದಾಮಪಂಡಿತನೂ ಕವಿಯೂ ಆಗಿದ್ದನು. ಈತನು ರಚಿಸಿದ ಗ್ರಂಥಗಳಲ್ಲಿ ಪ್ರಕೃತದಲ್ಲಿ ದೊರೆತಿರುವುವು ಯಾವುವೆಂದರೆ :—

ಸಂಸ್ಕೃತದಲ್ಲಿ :—೧. ಯದುಗಿರಿನಾರಾಯಣಸ್ತವ, ೨. ಯದುಗಿರಿನಾಯಕೀಸ್ತವ, ೩. ಶ್ರೀ ಲಕ್ಷ್ಮೀನೃಸಿಂಹಸ್ತವ, ೪. ಗೋಪಾಲಸ್ತವ,

---

[9] ಬಹುಧಾನ್ಯ ಸಂ॥ ಚೈತ್ರದಲ್ಲಿ ಬರೆದು ಕಳುಹಿಸಿದ ನಿರೂಪ,

[10] ನರಪತಿವಿಜಯ.

೫. ರಾಜಗೋಪಾಲಸ್ತವ, ೬. ಪರವಾಸುದೇವಸ್ತವ, ೭. ಮಂಜುಳ ಕೇಶವಸ್ತವ, ೮. ಪಶ್ಚಿಮರಂಗರಾಜಸ್ತವ, ೯. ಏಕಾದಶೀನಿರ್ಣಯ. ಇವುಗಳಲ್ಲಿ ೧ನೆಯ ಗ್ರಂಥಕ್ಕೆ ಈತನ ತಮ್ಮ ಮಿತ್ರವಿಂದಾಗೋವಿಂದ ವನ್ನು ರಚಿಸಿದ ಸಿಂಗರಾರ್ಯನು ವ್ಯಾಖ್ಯಾನವನ್ನು ಸಂಸ್ಕೃತದಲ್ಲಿ ಬರೆದಿದ್ದಾನೆ.

ಕನ್ನಡದಲ್ಲಿ:—೧. ಅಪ್ರತಿಮವೀರಚರಿತ, ೨. ಚಿಕದೇವರಾಯವಂಶಾ ವಳಿ, ೩. ಚಿಕದೇವರಾಜವಿಜಯ, ೪. ಚಿಕದೇವರಾಯಶತಕ, ೫. ಕರ್ಣಾ ಟಕ ಕೀರ್ತನೆಗಳು.

ಸಚ್ಛೂದ್ರಾಧಿಕಾರನಿರ್ಣಯ (ಸಂಸ್ಕೃತ), ಗೀತಗೋಪಾಲ, ಚಿಕ ದೇವರಾಯಬಿನ್ನಪ (ಕನ್ನಡ), ಮುಂತಾದ ಕೆಲವು ಗ್ರಂಥಗಳು ಚಿಕದೇವ ರಾಜಾಂಕಿತವಾಗಿದ್ದರೂ ಈತನೇ ಮಾಡಿದುವೆಂದು ಪ್ರವಾದವಿದೆ.

ಈ ಕವಿಯು ಉಭಯಭಾಷೆಯಲ್ಲಿಯೂ ಕವಿತ್ವದಲ್ಲಿ ಉತ್ತಮ ಸ್ಥಾನವನ್ನು ಪಡೆದಿದ್ದನೆಂದು ಈತನ ಗ್ರಂಥಗಳನ್ನು ಪರಿಶೀಲಿಸಿದವರು ನಿಸ್ಸಂದೇಹವಾಗಿ ಹೇಳುವರು. ಈತನೇ ವ್ಯಂಗ್ಯಪ್ರಧಾನವಾಗಿ ಕನ್ನಡ ದಲ್ಲಿ ಕಾವ್ಯವನ್ನು ಬರೆಯಲು ಮೊದಲುಮಾಡಿದನೆಂದು ಕೆಲವರು ಅಭಿಪ್ರಾಯಪಡುವರು.

—ಏತತ್ಕವಿಕೃತ ಕರ್ಣಾಟಕ ಗ್ರಂಥಗಳ ವಿಮರ್ಶೆ—

೧. **ಅಪ್ರತಿಮವೀರಚರಿತ**—ಇದೊಂದು ಅಲಂಕಾರ ಗ್ರಂಥ. ಇದರಲ್ಲಿ ಕವಿಯು ಚಂದ್ರಾಲೋಕ, ವಾಮನವೃತ್ತಿ, ಕಾವ್ಯಪ್ರಕಾಶ ಮೊದಲಾದ ಸಂಸ್ಕೃತ ಗ್ರಂಥಗಳಿಂದ ಲಕ್ಷಣಗಳನ್ನು ತೆಗೆದುಕೊಂಡು, ಅವುಗಳಿಗೆ ಕನ್ನಡದಲ್ಲಿ ಗದ್ಯರೂಪವಾದ ವೃತ್ತಿಗಳನ್ನು ಬರೆದು, ಕನ್ನಡದಲ್ಲಿ ತನ್ನಿಂದ ರಚಿತವಾದ ಪದ್ಯಗಳನ್ನು ಅವಕ್ಕೆ ಉದಾ ಹರಣೆಯಾಗಿ ಕೊಟ್ಟು, ಲಕ್ಷ್ಯ ಲಕ್ಷಣ ಸಮನ್ವಯ ಮಾಡಿದ್ದಾನೆ. ಆ ಲಕ್ಷ್ಯಪದ್ಯಗಳಲ್ಲಿ ವಿವೃತವಾದ ವಿಷಯಗಳು "ಅಪ್ರತಿಮವೀರ" ನೆಂಬ ಅಭಿಧಾನವುಳ್ಳ ಚಿಕದೇವರಾಯನ ಚರಿತ್ರವನ್ನು ಹೇಳುವು

ದರಿಂದ ಈ ಅಲಂಕಾರಗ್ರಂಥಕ್ಕೆ **ಅಪ್ರತಿಮವೀರಚರಿತ**ವೆಂಬ ಹೆಸರು ಸಮಂಜಸವಾಗಿದೆ. ಲಕ್ಷ್ಯ ಪದ್ಯಗಳಲ್ಲಿ ನಿರೂಪಿಸಿರುವ ಚಿಕದೇವ ರಾಯನ ಜಯಕಾರ್ಯಗಳು ಅತನು ಯುವರಾಜನಾಗಿರುವ ಕಾಲದಲ್ಲಿ ನಡೆದುವಾದುದರಿಂದಲೂ, ಈ ಕವಿಗೆ ಮಂತ್ರಿ ಪದವಿಯು ಬಂದ ಮೇಲೆ ಕಾವ್ಯರಚನೆಗೆ ಅವಕಾಶವು ಲಭಿಸುವುದು ಕಷ್ಟವಾದುದರಿಂದಲೂ ಈ ಗ್ರಂಥವನ್ನು ಕವಿಯು ಆಸ್ಥಾನಕವಿಯಾಗಿದ್ದಾಗಲೇ ರಚಿಸಿರಬೇ ಕೆಂದು ತೋರುತ್ತದೆ. (೧ನೆಯ ಪ್ರಕರಣ ಪದ್ಯ ೧೩).

೨. **ಚಿಕದೇವರಾಯ ವಂಶಾವಳಿ**—ಇದು ಮೈಸೂರು ಮಹಾ ರಾಜರುಗಳ ಚರಿತ್ರರೂಪವಾದ ವಚನಗ್ರಂಥ. ಇದು ಬಹಳ ಪ್ರೌಢವಾ ಗಿಯೂ, ರಸಭರಿತವಾಗಿಯೂ ಇದೆ. ಸಂಸ್ಕೃತದಲ್ಲಿ ಕಾದಂಬರಿಯು ಹೇಗೆ ಉತ್ತಮ ಗದ್ಯಗ್ರಂಥವೆನಿಸಿಕೊಂಡಿದೆಯೋ ಹಾಗೆಯೇ ಇದು ಕನ್ನಡದಲ್ಲಿ ಉತ್ತಮ ಗದ್ಯಗ್ರಂಥವೆನಿಸಿಕೊಂಡಿದೆ.

೩. **ಚಿಕದೇವರಾಜವಿಜಯ**—ಇದು ಮೈಸೂರು ಮಹಾರಾಜರ ಚರಿತ್ರರೂಪವಾದ ಚಂಪೂಪ್ರಬಂಧ. ಇದು ಬಹು ಶ್ಲಾಘ್ಯವಾದ ಕಾವ್ಯ. ಇದರಲ್ಲಿ ೬ ಆಶ್ವಾಸಗಳಿವೆ. ಮೊದಲನೆಯ ಆಶ್ವಾಸದಲ್ಲಿ ಇಷ್ಟದೇವತಾ ಭ್ಯರ್ಥನ, ಕವಿತಾವರ್ಣನ, ಜಗತ್ಸೃಷ್ಟ್ಯಾದಿ ಯದುಪರ್ಯಂತ ವಂಶ ವರ್ಣನವೂ ; ದ್ವಿತೀಯಾಶ್ವಾಸದಲ್ಲಿ ಬೆಟ್ಟದ ಚಾಮರಾಜ, ಚಾಮರಾಜ, ರಾಜರಾಜ, ಚಾಮರಾಜ, ಇಮ್ಮಡಿ ನರಸರಾಜ ಭೂಪಾಲರುಗಳ ಪ್ರಭಾವ ವರ್ಣನವೂ ; ತೃತೀಯಾಶ್ವಾಸದಲ್ಲಿ ದೊಡ್ಡದೇವರಾಜನ ಗುಣವರ್ಣನ, ಪುತ್ರಾಭಿಲಾಷೆ, ಶ್ರೀಕೃಷ್ಣಲೀಲಾಶ್ರವಣ, ಯಾದವಾಚಲಗಮನ, ಶ್ರೀ ನಾರಾಯಣವರಪ್ರದಾನ, ಪ್ರಜಾಪಾಲನಾದಿ ವರ್ಣನವೂ; ತುರೀಯಾಶ್ವಾಸ ದಲ್ಲಿ ಶ್ರೀಮದಮೃತಾಂಬಾದೌಹೃದ, ಕುಮಾರೋದಯ, ಬಾಲಲೀಲಾ, ಲಿಪಿಗ್ರಹಣ, ಶಾಸ್ತ್ರ ಪುರಾಣ ವೀಣಾ ಖುರಳೀಶ್ರಮ, ಯೌವನೋದಯಾದಿ ವರ್ಣನವೂ; ಪಂಚಮಾಶ್ವಾಸದಲ್ಲಿ ದೇವರಾಜದಿಗ್ವಿಜಯ, ಚಿಕದೇವರಾಯ

ದಿನಚರ್ಯಾದಿ ವರ್ಣನವೂ; ಷಷ್ಠಾಶ್ವಾಸದಲ್ಲಿ ರಾತ್ರಿವಿಹಾರವರ್ಣನೆಯೂ ಇವೆ.

ಈ ಗ್ರಂಥದಲ್ಲಿ ಕವಿಯ ಕವಿತಾಸಾಮರ್ಥ್ಯವು ಚೆನ್ನಾಗಿ ಕಾಣಬರುತ್ತದೆ. ಈ ಗ್ರಂಥದ ಅನೇಕ ಪದ್ಯಗಳು ಅಪ್ರತಿಮವೀರಚರಿತದಲ್ಲಿ ಉದಾಹೃತವಾಗಿವೆ.

ಈತನ ಕವಿತ್ವದ ವಿಷಯವಾಗಿ—"ಎನಿತಂದವಾಗಿ ಮೆಲ್ಪುವಡೆದ ಸಬ್ದಂಗಳ ಸೇರುವೆಯಿಂ ಸರಳವುಂ, ಕರಮೆಸೆವ ಪುರುಳ ಪವಣಿಗೆಯಿಂ ಸರಸವುಮೆನಿಸಿ ತನಿಸೊದೆಯ ಸೋನೆಯಂತೆ ಇನಿದಂ ಕಿವಿಗಳ್ಗೆ ಕಱೆಗುಮೀತಿರುಮಲಾರ್ಯರ ಬಾಯ್ದೆಱೆಯ ಸರಸತಿಯ ಸೈಪುವಡೆದ ಸಾಹಿತ್ಯಸೌಂದರ್ಯಂ" ಎಂದೂ,

"ಈಪಂಡಿತಕವಿಮಂಡಲಾಖಂಡಲರ್ ಪಿರಿದಾಗಿ ಶಾಸ್ತ್ರಸ್ಮೃತಿಸ್ತೋತ್ರಗ್ರಂಥಂಗಳಂ ಇವಲ್ಲದಿನ್ನುಂ ಸಕ್ಕದದೊಳಂ ಕನ್ನಡದೊಳಂ ಬೇಱೆ ವೇಱೆ ಕಿವಿಗಿನಿದಂ ಸೂಸುವ ಪಲವಗೆಯ ಕಾವ್ಯನಾಟಕಾಲಂಕಾರಂ ಮೊದಲಾದ ವಸ್ತುಕ ವರ್ಣಕ ಪ್ರಬಂಧಂಗಳಂ ಗಡಿಯಿಲ್ಲದೆ ನಿರವಿಸಿರ್ಪರ್" ಎಂದೂ.

ವೃ॥ "ಪಿರಿದುಂ ಪ್ರೌಢತ್ವಮಂ ಪೆರ್ಚಳಿಕೆ ಕವಿವರರ್ ಕಬ್ಬದೊಳ್ ಶಾಸ್ತ್ರದೊಳ್ ಮೇಣ್। ಕರಮೀಸಾಹಿತ್ಯದೊಳ್ ಬಿತ್ತರಿಪೊಡೆ ರಸಮಂ ತಿರ್ಮಲಾರ್ಯರ್ಗೆ ಸಲ್ಗುಂ॥ ತರಣಿದ್ಯೋತಂಗಳೇನಾಡವೆ ವಿಧುಮಣಿಯೊಳ್ ನೈದಿಲೊಳ್ ಮತ್ತಮಂ ತಾಂ। ಕರಗಿಪ್ಪಂ ಬಿಚ್ಚುವಂ ಚಂದಿರನೆ ಉಱದವರ್ಗೆಂತೊಸರ್ಗುಂ ಮಲರ್ಗುಂ॥" ಎಂದೂ ಮಿತ್ರವಿಂದಾಗೋವಿಂದ ನಾಟಕದಲ್ಲಿ ವರ್ಣಿತವಾಗಿದೆ.

---

# ಗ್ರಂಥಸ್ಥ ವಿಷಯಾನುಕ್ರಮಣಿಕೆ

———

ಪುಟ ಸಂಖ್ಯೆ

ಪುಟ ಸಂಖ್ಯೆ

———

॥ ಶ್ರೀರಸ್ತು ॥

# ಚಿಕದೇವರಾಯ ವಂಶಾವಳಿ

———o———

## ರಾಜನೃಪಚರಿತಂ

ಸ್ವಸ್ತಿ, ಸಮಸ್ತಭೂಮಣ್ಡಲಪುಣ್ಡರೀಕಕರ್ಣಿಕಾಯಮಾನ ಕನಕಾಚಲದಿಶಾಪರ್ಯನ್ತ ಪರಿಕರ್ಮಾಲಂಕರ್ಮೀಣ ಭಾರತವರ್ಷಮಣ್ಡನಾಯಿತ ಭರತಖಣ್ಡೋದ್ದಣ್ಡವೈಭವೋತ್ತಮರ್ಣಾಯಿತ ಕರ್ಣಾಟದೇಶದೊಳ್ ಕಾವೇರೀದಕ್ಷಿಣತೀರದೊಳನತಿದೂರದೊಳೆಸೆವ ಮಹೀಶೂರಪುರದೊಳ್ ಸಕಲ ಸಾಮನ್ತಕೋಟೀರಕೋಟೀಮಣಿಘೃಣಿಚಿತ್ರಿತಪದರಾಜೀವನೆನಿಸಿ ರಾಜಿಪ ಚಾಮರಾಜಂಗೆ ಚತುರತೆಗೊಲ್ದು ಮೆಯ್ವೆತ್ತು ಬಟೆಸಲ್ವ ನಾಲ್ಕುಮುಪಾಯದಂತೆಯುಂ, ತಮ್ಮಿಂ ತಾಮೆಳಸಿ ಬಂದ ಚತುರ್ವರ್ಗದಂತೆಯುಂ, ಈತನ ಸತ್ಯಾದಿಗುಣಂಗಳಿಂದೆ ದಶರಥಂಗೆತ್ತು ಮತ್ತಮೊಗೆದ ನಾರಾಯಣನ ನಾಲ್ಮೆಯ್ಗಳಂತೆಯುಂ, ಈತನ ಸೇನಾಧೂಳಿಗಳ್ಕಿ ಮೆಯ್ಯಿಕ್ಕಲೆಂದೊಡಲ್ವಡೆದೇಟ್ಟಂದ ನಾಲ್ಕಡಲಂತೆಯುಂ, ನೆಗಟ್ತೆವೆತ್ತ ನಾಲ್ವರ್ ಕುವರರೊಳಂ ಪಿರಿಯಂ ಎಲ್ಲಾರಾಯರ್ಗಂ ಪಿರಿಯನೆನಿಪ **ರಾಜನೃಪಂ** ನಿಜಕುಲಕ್ರಮಾಗತಕ್ಷಿತಿಯೊಳನುಜರ್ವೆರಸರಸುಗೆಯ್ಯುತ್ತಿರೆ—

ಅತ್ತಲುತ್ತರದೇಶದೊಳ್ ತುಂಗಭದ್ರಾತೀರದೊಳ್ ವಿದ್ಯಾನಗರಿಯನಾಳ್ದ ಹರಿಹರ ಬುಕ್ಕರ್ ಮೊದಲಾದ ಕುಱುಂಬರಾಯರನನ್ತರದೊಳರಸುಗೆಯ್ದ ತುಳವಕುಳದೀಶ್ವರ ನರಸ ವೀರನರಸಿಂಗ ಕೃಷ್ಣಾಚ್ಯುತರೆಂಬ ರಾಯರೈವರ ತಱುವಾಯಿಂ ಮುದದೊಳೆಳೆಯಂ ಪೊಱೆದ ಸದಾಶಿವರಾಯಂಗೆ ಸೇನಾನಿಯೆನಿಸಿದ ಆಂಧ್ರಕುಲದ ರಾಮರಾಜಂ ನಿಜರಾಜಂಗೆ ದ್ರವಿಡಾನ್ಧ್ರಕರ್ಣಾಟಸಾಮ್ರಾಜ್ಯಮಂ ಸಾರ್ಚಿ, ಪತಿಕಾರ್ಯದೊಳರ್ಪಿತಪ್ರಾಣ

ನೆನಿಸಿ, ಒರ್ಮೆಯುತ್ತರದಿಗ್ವಿಜಯದೊಳುದ್ವೃತ್ತಯವನಸೇನಾಚಕ್ರಮನೊಕ್ಕಲಿಕ್ಕಿ ಯಶಶ್ಶೇಷನಪ್ಪಿನಂ ; ಅವನನುಜಂ ಎರೆದಿಮ್ಮರಾಜಂ ಅಂದಿನಾಜಿಯೊಳೞಿದುೞಿದರನೊಡಗೊಂಡು ಊರ್ಗೆ ನಡೆತಂದಾಳ್ವನ ಸಿರಿಗೆಳಸಿಯುವನಂ ಭಂಗಿಸಿ, ತಾನೆ ರಾಯನೆನಿಸಿರ್ದೞಿಗಜ್ಜದಿಂದಾವಿದ್ಯಾನಗರಂ ಕಿಱಿದುಂ ದಿನಕ್ಕೆ ತುರುಷ್ಕರಿಂದೞಿಯುಲೊಡಂ, ಅಲ್ಲಿಂ ಪೆನಗೊಂಡೆಗೆಯ್ತಂದು ಒಂದೆರಟ್ಬರಿಸಮಿರ್ದು ಪೊಂದಿ ಪೋಪಾಗಳ್—ತನ್ನ ಮೂವರ್ಕುವರರೊಳ್ ಮೊದಲಿಗನಾದ ಶ್ರೀರಂಗರಾಜನಂ ಪೆನಗೊಂಡೆಯೊಳಿಟ್ಟಾತಂಗೆ ತೆಲುಂಗನಾಡೊಡೆತನಮುಂ, ಎರಡನೆಯ ರಾಮರಾಯನಂ ಶ್ರೀರಂಗಪಟ್ಟಣದೊಳಿರಿಸಿಯುವಂಗೆ ಕರ್ಣಾಟದೇಶಾಧಿಪತ್ಯಮುಂ, ಮೂಱನೆಯ ವೆಂಕಟಪತಿರಾಯನಂ ಚನ್ದ್ರಗಿರಿಯೊಳಿಟ್ಟು ಆತಂಗೆ ತುಂಡೀರ ಚೋಳ ಪಾಂಡ್ಯ ಮಂಡಲೇಶ್ವರತ್ವಮನಿತ್ತಂ. ಇವರೊಳ್ ಶ್ರೀರಂಗರಾಜಂ ಅಪುತ್ರನಾಗಿ ಬರ್ದಿಲಮನ್ನೈದಲೊಡಂ ; ಆವೆಂಕಟಪತಿರಾಯಂ ಪೆನಗೊಂಡೆಯೊಳಿರ್ದೆಳೆಯುಂ ಪರಿಪಾಲಿಸುತ್ತಿರೆ—

ಇತ್ತಲೀರಾಮರಾಜಂ ಕೆಲವುಂ ಕಾಲಕ್ಕೆ ಕಾಲಧರ್ಮಮನೆಯ್ದಿದ ಬೞಿಕ ತಿರುಮಲೆರಾಜಂ ಮೊದಲಾದ ಅವನ ಕುವರರ್ ಶ್ರೀರಂಗಪಟ್ಟಣದಲ್ಲಿ ರೇಮಟಿವೆಂಕಟಯ್ಯನೆಂಬ ತಮ್ಮ ದೞನಾಯನಿರಿಸಿ ತಾಮೆಳವರಯುದವರಾದುದಱಿಂದೆ ಪೆನಗೊಂಡೆಯುಂ ಪೊರ್ದಿ ಕಿಱಿಯಯ್ಯನ ಬೞಿಯೊಳಿರ್ದು ಬಳೆದರ್.

ಬೞಿಕ್ಕಾವೆಂಕಟಪತಿರಾಯಂ ಮಧುರೆಯ ವೀರಪ್ಪನಾಯಕನೊಳ್ ಮುನಿದು ದಂಡೆತ್ತಿ ನಡೆದು, ಪಾಣ್ಡ್ಯಮಣ್ಡಲದ ಮಧುರಾಪುರಮಂ ಸುತ್ತಿಮುತ್ತಿರ್ಪಿನಂ ; ಆ ವೀರಪ್ಪನಾಯಕಂ ಭೇದೋಪಾಯಮನವಲಂಬಿಸಿ, ರಾಯನ ಸೇನಾನಾಯಕರ್ಗೆ ದ್ರವ್ಯಭೂಷಣಂಗಳಂ ಕಳುಪಲೊಡಂ; ಈ ತಿರುಮಲೆರಾಜನಾಲಂಚಮುಂ ಕೊಂಡದರ್ಕೆ ವಿವೇಕದೊಡನೆ ತನ್ನುಮಂ ಕೀರ್ತಿಯುಮಂ ಸುಕೃತಮುಮಂ ಮಾಱಿ ತಂದೆಯುಮಾ

ಳ್ದನುಮಪ್ಪ ಕಿಱುಯುಯ್ಯನೊಳ್ ಗೆಂಟುಗೊಂಡು ತನ್ನ ಕರಿತುರಗಪದಾತಿಗೆಳ್ವೆರಸತ್ತಣಿಂ ಶ್ರೀರಂಗಪಟ್ಟಣಕ್ಕೆ ಬಂದನೆಂಬ ವಾರ್ತೆ ಬರಲೊಡಂ ; ಅದಂ ಕೇಳ್ದು ರಾಜನೃಪಂ ತನ್ನನುಜಸೇನಾನಿಮಹಾಮಾತ್ಯಮಿತ್ರರೊಡನಾಳೋಚಿಸಿ ನಿಶ್ಚಯಂಗೆಯ್ದು— ಈ ಪಿತೃಘಾತಿಯನೀಪಟ್ಟಣದಿಂ ಪೊಱಮಡಿಸವೇಱ್ಕುಂ, ಅದರ್ಕಿವನ ಸಪ್ತಾಂಗದಿರವನಾರೆಯ್ವೆನೆಂದು ಗೂಢಚಾರರಂ ಪ್ರಣಿಧಿಗಳುಮಂ ಕಳುಪುವಿನಂ ; ಅವರ್ ಅಲ್ಲಿ ಕೆಲವುಂ ದಿನಮಿರ್ದು ಮಗುಱ್ದಾಳ್ವನೆಡೆಗೆಯ್ತಂದು ಒಳಒಲಗದೊಳ್ ಕೆಯ್ಮುಗಿದು ಬಿನ್ನಪಂಗೆಯ್ದರ್. ಅದೆಂತೆನೆ :—

ದೇವ ! ಚಿತ್ತೈಸು. ಆಪೊಱಲಂ ಬಳಸಿ ಬಲ್ಪೊಱಿ ಕಲ್ಪೋದಧಿಯಂತಿರ್ತಡಿಯಂ ಕ್ಪೆಗಣ್ಮಿ ಪೊಣ್ಮಿ ಬರ್ಪೂರ್ಮಿಗಳಿಂ, ಕಟ್ಟುಜದಿಂ ಪರಿವ ನೀರ್ಪೊನಲೊಳವೊಯ್ದು ಕೋಲಾಹಲಂಗಳಿಂದೆಡೆಯೆಡೆಯೊಳೊಗೆದು ಸುಱನೆ ಸುತ್ತಿ ಗರ್ತದಂತಿಱುವ ಮಹಾವರ್ತಂಗಳಿಂ, ತಿಮಿತಿಮಿಂಗಿಲಂಗಳಂ ಕೆಳೆಗೊಳ್ವ ಪೆರ್ಮೀನ್ಗಳ ಬಾಳಚಳನದಿಂ ಕರೆಗಣ್ಮುವ ಕರ್ಮುಡುವಿನೆಡೆಯೊಳ್ದಡದಡಿಸಿ ನಾವೆಯೊಳಿಡಿಕಿಱಿದ ಜನದಾರ್ತನಿನದಕೋಲಾಹಲದಿಂ ದಿತ್ತಣಿನತ್ತಣ್ಗೆ ಪಾಱಲರಿಯದೆಱಂಕೆಯುಲುಂಕಿಯುಳವಱಿದೆಡೆಯೊಳ್ ಪಡಲ್ವಡುವ ಪಲವಕ್ಕಿಗಳ ಮೊತ್ತಮುಂ ತುತ್ತಲೆಂದು ಸಿಡಿವ ಸೀಮೀನ್ಗಳಿಂ, ನೀಗುರ್ಡಿಯಲ್ಕಿಱುವುರ್ಕಾನೆಗಳ ಸೊರ್ಕಿನ ಸೊವಡಂ ಸವಿದು ಕನಲ್ದು ಕಾದುವ ನೀರಾನೆಗಳಿಂ, ಮಹಾಹ್ರದಂಗಳಂ ಮುನ್ನೀರ್ಗೆತ್ತು ನೀರನೀಂಟುವ ಕಾರ್ಮುಗಿಲ್ಗಳನಾನೆಯೆಂದು ಬಗೆದು ನುಂಗಲಂಗವಿಪ ನಕ್ರಂಗಳಿಂದತಿಭೀಕರಮೆನಿಸಿಯುಲಂಘನೀಯಮಾಗಿರ್ಪುದು. ಅದಱ ಒಳವಳಯದ ಕೋಂಟೆ ಸುರಪುರದ ಸಾಲೌನ್ನತ್ಯಮುಂ ಕೀಱಿಗ್ಗಯ್ಯಲೆಂದು ಬಳೆದಿರ್ಪುದು. ಅಲ್ಲಿಯ ಮುಗಿಲಟ್ಟಳೆಗಳೊಳಿರ್ಪ ಕಾವಲವರ್ಗೆ ಸೂರ್ಯಮಣ್ಡಲಂ ಮುಂಡೆದೆಸೆಯೊಳಿರ್ದೊಡಮಡಿಗೋಂಟೆಯುಂ ಪೊಡೆದು ಪೊಡೆದು ಸಿಡಿವ ಪೊಱಿಯ ತೆರೆಯ ಸೀರ್ಪನಿಗಳಿಂ ನನೆದಾಶೀತೋಷ್ಣಂಗಳಂ

ಸರಿಗೆಯ್ದು ಸೊಗದೊಳಿರ್ಪರ್. ಆಳ್ವೇರಿನೆಲಗಟ್ಟುಗುಟ್ಟಿಗಳ್ ನಾಗಭುವನದಿಂ ನಾಕಲೋಕಂಬರಂ ಮಿಾಱಿ ಬಳೆದ ಕೋಂಟೆಯನಳೆನಾಗಳ್ ಬರೆದ ಸ್ವರ್ಗಮರ್ತ್ಯಪಾತಾಳಂಗಳಳತೆಗೆಱಗಳಂತಿರ್ಪುವು. ಸುತ್ತಣ ಕೊತ್ತಳಂಗಳ್ ಗೋತ್ರಾರಿಯ ವಜ್ರಹತಿಗಳ್ಗಿವಂದು ರಂಗೇಶನಂ ಮಱವೊಕ್ಕು ಶತಘ್ನೀವ್ಯಾಜದಿಂ ಕೌಮೋದಕೀಮುದ್ರೆಯಂ ವಹಿಸಿ ನಿರ್ಭಯಂಬೆತ್ತ ಕುಲಾಚಲಂಗಳಂತಿರ್ಪುವು. ಆಚೌವೀಧಿಯೊಳೆಸೆವ ಪೊನ್ನ ರನ್ನದ ನೆಲೆವಾಡಂಗಳ್ ರಂಗೇಶನಂ ಸೇವಿಸಲಿೞತಂದ ವೈಮಾನಿಕರ ದಿವ್ಯವಿಮಾನಂಗಳಂತಿರ್ಪುವು. ದಿವ್ಯವಿಮಾನ ಮಣ್ಟಪ ಪ್ರಾಕಾರಗೋಪುರಂಗಳಿಂದೆಸೆವ ದೇಗುಲಂ ವೈಕುಣ್ಠದಂತಿರ್ಪುದು. ಅಲ್ಲಿ ಶೇಷತಲ್ಪದೊಳ್ ಪವಡಿಸಿದ ಶ್ರೀರಂಗನಾಥಂ ವೈಕುಣ್ಠಪತಿಯಂತಿರ್ಪಂ. ಅಂತಿರ್ಪ ಪುರವರಮಂ ಪೊಱವರಸನಿರವುಂ, ಅವನನುಚರರ ಪರಿಯುಂ, ಅವನ ಸೇನಾನಿಯ ನಯಮುಂ, ಅವನ ಮಿತ್ರರ ಚರಿತ್ರಮುಂ, ಅವನಮಾತ್ಯರ ಕೃತ್ಯಮುಂ ಅತ್ಯಂತ ವಿಚಿತ್ರಮಾಗಿರ್ಪುದು. ಆದಂ ದೇವರಡಿಯೆಡೆಯೊಳ್ ಬಿನ್ನವಿಪೊಡೆಮಗೆ ಅಳ್ಕು ತೋಱುತಿರ್ಕುಮೆಂದವರ್ ಪಿಂದೆಗೆಯಲೊಡಂ ;

ಈ ರಾಜನೃಪನವರೊಳ್ ದಯಾವಲೋಕನಮಂ ಸುಱಿಸಿ— ಅಪ್ರಿಯಮಾದೊಡಂ, ಗ್ರಾಮ್ಯಮಾದೊಡಂ, ಪಱವಾದೊಡಂ, ಪರಿಹಾಸಮಾದೊಡಂ, ಚುನ್ನನಾದೊಡಂ, ಜುಗುಪ್ಸೆಯಾದೊಡಂ, ಇರ್ದುದನಿರ್ದಂತರಸಂಗೆ ಒಳಓಲಗದೊಳಱುಪುವುದೆ ದೂತರ್ಗೆ ನೀತಿ. ನೀಮದಱಂ ಬೆರ್ಚದೆ ಬಿತ್ತರಿಪುದೆಂದಾಣತಿಯಿಾವುದುಮವರ್ ಬಿನ್ನವಿಸಿದರದೆಂತೆನೆ :—

ಆರಾಯಂ ಚೆಲ್ವಂ ಪಡೆದ ಕಡುಪಿಂ ಮಡದಿಯರ ಮೆಯ್ಯೊಳ್ಗಟದೊಳೆಡೆವಿಡದಿರ್ದು ಕಂಟಕಶೋಧನ ಪ್ರಜಾಪಾಲನ ದಂಡಯಾತ್ರಾದಿ ಕ್ಷಾತ್ರಸ್ವಭಾವಕರ್ಮಮಂ ತತ್ತದಧಿಕಾರಿಗಳ್ಗೊಪ್ಪಿಸಿರ್ಪಂ. ಅನುಚರರುಂ ಪೆಣ್ಗೊಟದೊಳ್ ನೆರವೆನಿಪ್ಪ ವೃಷ್ಯೌಷಧಮಂತ್ರತಂತ್ರಘುಟಿಕಾಮೂಲಿಕಾಸ್ರಕ್ಚಂ

ದನಾದಿ ವಸ್ತುಸಂಪಾದನನಿಪುಣರೆನಿಸಿ ವಿಟವಿದೂಷಕಪ್ರಾಯರಾಗಿ ರ್ಪರ್. ಸೇನಾನಿ ಅನೆಕುದುರೆಕಾಲಾಳ್ಗಳನೊಟ್ಟುಗೆಯ್ದು ದಂಡೆತ್ತುವ ಯತ್ನಮನುಱಿದು ತನ್ನಾಳ್ದನಂ ಬೇಂಟೆಯೊಳ್ ಮೆಚ್ಚಿಸಿ ಬಸಂಗೆಯ್ದಪೆ ನೆಂದು ದಡಿವಲೆಗಳಂ ಬಡಿಕೋಲ್ಗಳಂ ಅಂಟುಗಳೆಗಳಂ ಕಾಲ್ಗಣ್ಣಿಗಳಂ ಗಿಡುಗಸಾಳುವಜಾಯಿಲಂಗಳಂ ದೀಹದ ಮಿಗವಕ್ಕಿಗಳಂ ತರಿಸಿರಿಸಿ ಪರಿ ಕಿಪ ವ್ಯಾಪಾರದೊಳ್ ಬೇಡವಡೆಯೊಳೊಡವೆರೆದಿರ್ಪಂ. ಮಿತ್ರರೊಳುತ್ತ ಮರ್ ಈಯಿರ್ಕೆ ತಕ್ಕುದಲ್ತೆಂದು ಪಲವರ್ಮೆ ತಿಳಿಪಿ ತಮ್ಮ ನುಡಿ ಬಱಿಡಾ ದುದಱಿಂ ಬಗೆದೆಗೆದಿರ್ಪರ್. ದುರ್ಮಿತ್ರರ್ಕ್‌ ಸ್ತ್ರೀವ್ಯಸನಾಸಕ್ತಿಯುಂ ಮುಚ್ಚಿ ಮುಚ್ಚಿ ಮನಂಗೊಂಡು ಕೊಂಡಾಡಿ ತಾಮುಮಿದಱೊಳಟ್ಟು ಮುಳುಂಗಿ ರ್ಪರ್. ಮಂತ್ರಿಗಳೀರಾಜಸೇನಾನಿ ಪರಿಜನಂಗಳಿರವನಾರಯ್ದು ತಾಮುಂ ದಂದುಱಿದಿರ್ಪುದೇ ಪರಮಲಾಭಮೆಂದು ತಮ್ಮಿಷ್ಟದೇವತೆಗಳ್ಗೆ ವಂದಿಸಿ ಅವರಱಿಗಜ್ಜಮನನುಮೋದನಂಗೆಯ್ಯುತೆ ಹಿತಾಹಿತಚಿಂತೆಯನುಱಿದಿ ರ್ಪರ್. ಕಾಯಸ್ಥಪ್ರಾಡ್ವಿನಾಕಾದಿ ವಿವಿಧಾಧಿಕಾರಿಗಳುತ್ಕೋಚವಂಚ ನಾದಿಗಳಿಂದೆಡೆಗೆಡೆಗಿರ್ಮಡಿಸುವ ತೆಱಿಗೆ ಬೇಡಿಗೆ ಬಿರಾಡ ಬಿಟ್ಟಿಗಳಟ್ಟು ಳಿಯಿಂ ಪ್ರಜೆಗಳಂ ಕಿಡಿಪರ್ —ಎಂದು ನುಡಿದು ಒರ್ವಂ ಸುಮ್ಮನಿರೆ ; ಪೆಱತೊರ್ವಂ ಬೇಹಿಗನಿಂತೆಂದಂ :—

ಜೀಯ ! ಚಿತ್ತವಿಸು. ಇವರಿರವಂ ಕೇಳ್ವುದರಿದಾದೊಡಂ ಸ್ಮರಣೆ ಗೊಂಡಾಲಿಪುದು. ಪೊತ್ತುಱಿಯುಣಿಸಿಂಗೆಂದು ತೆಲುಂಗರಡಿಗೆವನೆಯೊಳ್ ತುಪ್ಪುಟ್ಟುತ್ತ ಕತ್ತರಿಪ ಪಲವಕ್ಕಿಗಳುಲಿಗೇಳ್ದುಪ್ಪವಡಿಪರ್. ಬಱಿಕ್ಕೊಲಿ ಗೆಂಡದೊಳ್ ಸುಡುವ ಪಱಿಗಂಡದ ಪೊಲಸುಗಂಪಿಂಗೆ ಪೇಸಿದಂತೆಡೆಯೆಡೆ ಯೊಳ್ ಮೂಗುವಿಡಿದು ಸಂಧ್ಯಾಜಪಮನೊಡರಿಪರ್. ಉಣ್ಬಾಗಳ್ ಕಱಿವೆಯೋಗರಮುವ್ವುಂ ಕಾಯ್ಕುಚ್ಚಿಡಿ ಕಜ್ಜಾಯಂಗಳುಮಂ ಕಳೆದು, ಪಾಲ್ಮೊಸರ್ಗಳಂ ಪಱಿದು ಕರುಳ್ ಬಾಡು ಮಿದುಳ್ಗಳಂ ತಿಂದು ಬಸಿನೆ ತ್ತರನೀಂಟಿ ಬೆಱಿತು ಬೀಗಿ ತೇಗಿಯುರ್ಕಿ ಸೊರ್ಕಿ ಪೆರ್ಕಳಿಸುವರ್.

ಬಱಿಕ್ಕೆ ವಿಕ್ಕವೊಟ್ಟಂ ಕೋೞಿತಗರ್ಗಳ ಜೂದುಗಾಳೆಗದೊಳ್ ಕಳೆದು ಅಲ್ಲಿ ಸೋಲ್ತುದಂ ತಂತಮ್ಮಡಿಗೆವನೆಗಂ ತಮ್ಮ ನೇಹಿಗರ ಮನೆಗಂ ತಾವೆ ಕೊಯ್ದು ಪಚರ್ಸುಗುಡುವರ್. ಸಂಜೆಯೊಳ್ ಮಿಗವೇಂಟೆಗಾಱರ್ ಪಂದಿ ಮೊಲ ಪುಲ್ಲೆ ಮಱಿ ಸಾರಂಗಂಗಳ್ ಮೊದಲಾದ ಮಿಗಂಗಳಂ, ಪಕ್ಕಿ ವೇಂಟೆಗಾಱರ್ ಸೋಗೆ ಲಾವುಗೆ ಗವುಜು ಗೀಱುಗ ಗೊರವ ಪಾರಿವ ಗುಬ್ಬಿ ಕರ್ಬಕ್ಕಿ ಬೆಳ್ವಕ್ಕಿಗಳ್ ಮೊದಲಾದ ಪಕ್ಕಿಗಳಂ, ನೀರ್ವೇಂಟೆಗಾಱರ್ ಮೀನೇಡಿ ಯಾಮೆಗಳ್ ಮೊದಲಾದ ಜಲಚರಪ್ರಾಣಿಗಳಂ, ಕಿಱು ವೇಂಟೆಗಾಱರ್ ಇಲಿ ಬೆಳ್ಳಿಲಿ ಮೊದಲಾದ ಬಿಲಚರಪ್ರಾಣಿಗಳಂ ತಂದು ಮುಂದಿರಿಪುದುಂ—ಅವಂ ನಿಟ್ಟಿಸಿ ಕೈಮುಟ್ಟಿ ಪರಿಕಿಸಿಯುವಱೊಳ್ ಸಾರಮನಱಿತು ಸಂತಸಂಬಟ್ಟು, ಅವಂ ತಂದವರ್ಗಿಷ್ಟಾರ್ಥಮುಂ ಕೊಟ್ಟು ಮನ್ನಿಪರ್. ಮತ್ತಮೇಂ? ಊರ್ವಂದಿಯುಂ ತಂದವಂಗೂರುಂಬಱಿಯುನೀವರ್ ; ಕುಱಿಯುಂ ತಂದವಂಗೆ ತೆಱಗೆಯುಂ ಮನ್ನಿಪರ್ ; ಗೆಂಡೆಮೀನಂ ತಂದವಂಗೆ ದಂಡಿಗೆಯುನಿಕ್ಕುವರ್ ; ಉಡುವಂ ತಂದವಂಗೆ ಕೊಡಿಗೆಯುಂ ಕುಡುವರ್. ಇನಿತಱಿಂ ತಣಿಯದೊಂದೊಂದು ದೆವಸಂ ತಾವೆ ವಿಲಾಸದಿಂ ತಮ್ಮ ನೇಹಿಗರ್ವೆರಸು ಬೇಂಟೆಗೊಳವಿಗಳಂ ತಳೆದು ಪೋಱಮಟ್ಟು ದೇಗುಲದ ಗೋಪುರಪ್ರಾಕಾರಮಂಟಪವಿಮಾನಂಗಳೊಳ್ ನೆಲಸಿರ್ಪ ಕಿಱುವಕ್ಕಿಗಳನೂದಿ ಮಿಂಟೆಗಳಿಂದಿಟ್ಟು ಕೆಡಪಿಯುವಱೊಳೊಂದೊಂದು ಗರ್ಭಗೃಹಮಂ ಪೊಕ್ಕೊಡಂ ಬಿಡದೆ ಪಿಡಿದಲೆಯಿಕ್ಕಿ ತಂದು ಅವು ಸ್ವಾರ್ಜಿತಂಗಳಾದುದಱಿಂದತಿಪ್ರೀತಿಯಿಂ ತಂತಮ್ಮ ಸತಿಸುತಹಿತರೊಡವೆರಸುಣ್ಬರ್. ಇಂತೆತ್ತಾನುಮೊರ್ಮೆ ಸವನಿಸದೆ ಪೋಪ್ಪುದೆಂಬ ತಳ್ಳಂಕದಿಂ ತಂತಮ್ಮ ಮನೆಯೊಳೆ ಸಾಕುವ ಕೋೞಿ ಹುಂಜ ಮಱಿ ಮೊಟ್ಟೆಗಳುಮಂ, ಪಂದಿಯ ಸಲಗ ಮಱಿಯೆಡೆಮಱಿ . ಕಿಱುವಱಿಗಳುಮಂ ಲಾವಣಿಗೆಗೊಂಡು ಪದುಳದಿನಿರ್ಪರ್. ಊರೂರ್ಗಳಿಂ ತಪ್ಪುಲುಪೆಗಳ ಪಣ್ಪಾಯ್ಪುಬೆರ್ಗಳನೀರ್ಗಳಂ ಕಸನೆಂದು ಮಾಣಿಸಿ ಮಿಗವಕ್ಕಿಗಳಂ ತಪ್ಪು

ದೆಂದು ನಿರವಿಸುವರ್. ಅಂತುಮಲ್ಲದೆ ಅವರ ಅಂಗಳಂಗಳಾವಗಂ ಕೊಯ್ದುಡೆದುಗಿದ ಪಸಿದೊವಲ್ಗಳಿಂ, ಪೞಿಯೆಲೆಗಳಿಂ, ಗಿಳಿಯ ತುಪ್ಪುೞ್ಗಳಿಂ, ಪಂದಿಯ ಮೆಯ್ನವಿರ್ಗಳಿಂ, ಮಾಂಸಮುಂ ಸಂಸ್ಕರಿಸಲ್ಕೆಡೆವಿಡದಿಡಿದೆಡೆಯೊಳುದಿರ್ದರಿಸಿನಪುಡಿಗಳಿಂದೆಸೆವ ಪಂಚವರ್ಣದ ರಂಗವಲ್ಲಿಗಳಿಂ, ಇರ್ತರದೊಳ್ಕಟ್ಟಿದ ನೇಣ್ಗಳೊಳ್ ನೇಲ್ದೊಣಗುವ ಕೆಂಗಂಡದ ಚಿಗುದೋರಣದಿಂ, ಕಿಱುನರದೊಳ್ ಕೋದು ಬಿಗಿದು ಜೋಲ್ವೆಳಮೀನ್ಗಳ ಸರದ ಮುತ್ತಿನ ಲಂಬಣಂಗಳಿಂ, ನಿಡುಗರುಳ ಪವಳದ ಸರಂಗಳಿಂ, ದೀಹವಕ್ಕಿಗಳಿಂಚರದ ಕೊಳಲ್ಕೊಗ್ರಬೀಣೆಗಳಿಂದರೆವಱದೂರ್ವಂದಿಗಳ್ ಚೀಱುವ ದನಿಯ ಬುರುಗುಗಳಿಂ, ಪುಂಜಗಳುಗ್ಗಡಣೆಯ ಕಾಳೆಗಳಿಂದರೆಗೊರಲನರಿವೆಡೆಯೊಳ್ ಪೊಡವಿಯನೊದೆವಾಡುಕುಱಗಳ ಖುರಪುಟನಿನದದ ಮುರಜಂಗಳಿಂ, ಪುಱದಿರಿಸಿದೀಚಲ್ಬುೞಿಕೆಂಜಿಗಗಳ ಲಾಜಾಕ್ಷತೆಗಳಿಂ, ಪಱದು ಕಿಟ್ಟಿ ಪೆರ್ಗಿಳಿಗಳ ಸಿಡುಗಱಗಳ ದರ್ಭೆಗಳಿಂದಾಮೆಯೋಡ ಕಪ್ಪರೆಯೊಳ್ ತೀವಿದ ಬಸೆಯ ಹೋಮದ್ರವ್ಯದಿಂ, ಪೊಸನೆತ್ತರೋಕುೞಿಯಿಂ—-ಪಾಪಕನ್ಯೆಯ ಮದುವೆಮನೆಯಂತಿರ್ಪುವು. ಮತ್ತಮವರ ಪಸುಳೆಗಳ್ ಪಕ್ಕಿಯ ಪಿಡಿದಲೆಯೊಳ್ ತಿಱಕಲ್ಲಾಟಮುಂ, ಕೈಕಾಲ್ಗಳೆಲುಗಳನುಡಿವೆಡೆಯೊಳ್ ಕೋಲಾಟಮುಂ, ಕೇಱ ಪಾಱ ಬವಣಿಗೊಂಬ ಮಱವಕ್ಕಿಗಳನಟ್ಟಿ ತಱುಬಿ ಪಿಡಿವಲ್ಲಿ ಪಱವಱಯಾಟಮುಂ, ತುಪ್ಪುೞ್ಗೇಱಿ ಸಿಡಿವ ಪಾರಿವಂಗಳಂ ಪೊಯ್ದು ನೆಲಕ್ಕೆ ಕೆಡಪುವಲ್ಲಿ ಪೊಡೆಸೆಂಡಾಟಮುಂ, ತುಡುಂಕಿ ಪಿಡಿವೆಡೆಯೊಳ್ ಕೊಡಪುವ ಕೋೞಿಯೆಱಂಕೆಯ ಪೊಯ್ಲಿಂ ನೆಗೆದ ದೂಳಿ ಕಣ್ಗೆ ಬೀೞೆ ಕಣ್ಮುಚ್ಚುವುದಱಿಂ ಕಣ್ಮುಚ್ಚಾಟಮುಂ ಕಲ್ವರ್. ಅಂತುಮಲ್ಲದೆ ಅವರ್ಗೆ ಹರಣಂಬೆರಸು ಚತುರ್ಥವ ಸಲಗನನ್ನರಿಚದಂತೆ ಬಾಯ್ಮುಚ್ಚಿ ಪಿಡಿವುದಱೊಳ್ ಮುಷ್ಟಿಶಕ್ತಿಯುಂ, ಮಂಗಳವರದೋಳಿರ್ಪ ಮಱಗುಬ್ಬಿಯುಂ ಕೊಳವಿಮೀಂಟೆಗಳಿಂದಿಟ್ಟು ಕೆಡಪಲ್ ಗುಱಿನೋೞ್ಪಲ್ಲಿ ದೃಷ್ಟಿಶಕ್ತಿಯುಂ, ಹಬ್ಬ ಮದುವೆ

ಬಿರ್ದೂಟಂಗಳೊಳ್ ಪಲವಾಡುಕುಱಿಗಳಂ ತಱಿವಾಗಳ್ ತೋಳ ಬಲ್ಪಿಂ, ಪರಿದೋಡುವ ಪಂದಿಯಂ ತವಕದಿನಟ್ಟಿ ಪಿಡಿವಲ್ಲಿ ಕಾಲ ಬೇಗಮುಂ ಕೊಯ್ವ ಕೊಱೆವ ಕೊರ್ಚುವೆಡೆವುಗಿವ ಸೀಳ್ವ ಕಡಿವ ಕತ್ತರಿಪ ಮಿದಿವ ಸದೆವರಿವುರ್ದುವ ಸುಡುವಡುವ ಸುಂಟಗೆಗಳೆವ ನೆತ್ತರ್ಗಱೆವ ಬಸೆದೆಗೆವ ಕರುಳನುರ್ಚುವ ಗೆಯ್ಮೆಯೊಳ್ ಕೈಮೆಯುಂ ಸಫಲಮಪ್ಪುವು. ಇವಱ ನೋಟದೊಳೆ ಕಣ್ಗಳನಿವಱ ದನಿಯೊಳೆ ಕಿವಿಗಳನಿವಱ ಸೊವಡೊಳೆ ಮೂಗನಿವಱ ಸೋಂಕಿನೊಳೆ ತೊವಲನಿವಱ ಸವಿಯೊಳೆ ರಸನೆಯುಂ ಸವಿಗಾಣಿಸಿ ಪೆಱತೊಂದಱೊಳಾಸೆಯಂ ತೊಱೆಯಿಸಿ ಕಡುಸಂತಸಂಬಡೆದಿರ್ಪರ್. ಮತ್ತಮೇಂ? ಕಿಱಿದುಂ ದಿವಸದೊಳೆ ಪೊೞೆಯ ಮೀಂಗಳುಂ ತೀರ್ವುವು : ಆಬೞಿಕ್ಕವರೆಂತಿರ್ಪರೊ? ತಂದೆಯ ತದ್ದಿನಮೆಂದೊಂದು ದಿವಸಮುೞಿದುದರ್ಕೆ ಮೆಯ್ಗಱಗುವರ್ ; ಏಕಾದಶಿಯೊಳಿವಿಲ್ಲಿದುದರ್ಕೆ ಬಾಯ್ನೀರೊಱೆತು ಬಣ್ಣಂಗುಂದುವರ್; ಕಟ್ಟಿಡಱೊಳ್ ಬಿಟ್ಟಿರಲಾಱದೆ ಸುಟ್ಟ ಪಕ್ಕಿಯನೆಡಗೆಯ್ಯೊಳಿಟ್ಟು ಆಗಂಧಮನಾಘ್ರಾಣಿಸುತ್ತೆ ಪಥ್ಯಮಂ ಕೊಂಬರ್, ಎಂದು ಬಿನ್ನವಿಸುತ್ತಿರೆ—

ಅರಸನದರ್ಕೆ ಪೇಸಿ ಪೆಱತೊಂದಂ ಕೇಳ್ವೆನೆಂದದಂ ಮಾಣಿಸಿ ಅವರ ಸಂಧಿವಿಗ್ರಹಾದಿ ಷಾಡ್ಗುಣ್ಯದೆಸಕಮಂ ಬೆಸಗೊಳೆ ಪೇೞ್ದಂ :—

ದೇವ! ಚಿತ್ತವಿಸು. ಆಂ ಬಿನ್ನವಿಪುದಱೊಳೇನಾನುಂ ಮಱೆವೋಸದಿಂ ಪೆರ್ಚುಕುಂದುಳ್ಳೊಡದಂ ಸೈರಿಪುದು. ಆ ತೆಲುಂಗರಾಯುಗುವರಂ ಮಧುರೆಯತ್ತಣಿಂ ಪಡೆವೆರಸು ಬರ್ಪುದಂ ಕೇಳ್ದು ಈಪ್ರಾಂತದ ನಾಡುಬೀಡುಗಳನಾಳ್ವ ಪಾರ್ವದೊರೆಗಳುಮರಸುಮಕ್ಕಳುಮೊಕ್ಕಲಿಗರುಂ ಬಣಂಜಿಗರುಂ ಬೇಡರುಂ ಮೊದಲಾದ ಪಲಂಬರ್ ಪ್ರಭುಗಳ್ ತಮ್ಮುಳ್ಳ ಧನ ಕನಕ ವಸ್ತು ವಾಹನಂಗಳಂ ಕೊಂಡು ಕಾಲ್ಗೆಱಗಿ ಕಪ್ಪಕಾಣ್ಕೆಗಳನೊಪ್ಪಿಸಿಯವನ ಮುದ್ರೆಯಂ ವಹಿಸಿಯುಂ ಪೆಸರ್ವೊತ್ತುಮಾಳ್ಗೆಯ್ದುಂ ಅವನೊಲವಂ ಪಡೆದು ತಂತಮ್ಮ ನೆಲದೊಡೆತನಮಂ ನೆಲಗೊಳಿಸಿಯುನಿಬ

ರುಮೊಂದಾಗಿ—ಪೊಸನೇಸಱಿಖೊಳ್ ಪೊಣರ್ಕೆಗೆಳಸುವ ಮುರ್ಬಿನ ಪರ್ಬು ಗೆಯಂತೆಯುಂ, ಬಿಱುಗಾಳಿಯಂ ತಱುಬಲೆಣಿಸುವ ಮುಗಿಲ ಮೋಹರ ದಂತೆಯುಂ, ಪೆರ್ಗಿರ್ಚಿಗಿದಿರ್ಚಿ ನಿಲಲ್ಬಯಸುವ ಪಟ್ರಿಯ ಮೊತ್ತದಂತೆ ಯುಂ, ಕರೆಗಣ್ಮ್ರುವ ಪೊಟಿಯ ಪೆರ್ಮೆಗೆ ಮಾರ್ಮಲೆಯಲಾಸೆವಡುವ ಮಟಿಲ್ಗಟ್ಟೆಯಂತೆಯುಂ, ಪಕ್ಕಿಯಾಣ್ಮನೊಳ್ಪಳಂಚಲ್ ಪೊಂಚುವೊಳ್ಪಿಗ ಳೊಟ್ಟಿಲನಂತೆಯುಂ, ಗಂಡುಸಾಳುವನನಂಡಲೆಯಲುಜವಣಿಪ ಗೂಗೆಗಳ ಗುಂಪಿನಂತೆಯುಂ, ಮತ್ತಮೇಂ, ಸಿಂಗದೊಳ್ ಕಾದಲಂಗವಿಪ ಜಾಯಿ ಲಂಗಳ ಜಂಗುಳಿಯಂತೆಯುಮವರ್ ಮುಂತಱಿಯದೆ ದೇವರಡಿಯೊಳ್ ಮಚ್ಚರವುಂ ಮನಂಗೊಳಿಸಿರ್ಪರೆಂಬುದುಂ ;

ಅರಸನಾದೂತನ ಮೊಗಮುಂ ನೋಡಿ—ನಿನ್ನೀನುಡಿಗಳಿಮಗೆ ಕಿವಿ ಗೊಳವೇಱ್ಟುಮೆಂದು ಕಂಡುದಱಿಖೊಳ್ ಕೆಲಕೆಲವಂ ಕೂಡಿ ಕಳೆದು ಕಬ್ಬಂ ಗೆಯ್ಯದಿರ್ದುದನಿರ್ದಂತೆ ಪೇಟ್. ಅವರೆನ್ನೆಡೆಯೊಳೆಣಿಸಬಾರದುದನೆಣಿ ಸಿದೊಡಮಾಡ ಬಾರದುದನಾಡಿದೊಡಮೆಸಗಬಾರದುದನೆಸಗಿದೊಡಮುದ ರ್ಕಂಜದಿರೆಂದು ನಿರವಿಪುದುಂ ; ಅವಂ ಕೈಮುಗಿದಿಂತೆಂದಂ :—

ದೇವ ! ನೀನೆನ್ನ ಬಿನ್ನಪಮಂ ದಯೆಯಿಂದಾಲಿಪುದು. ಒರ್ಮೆ ಆ **ತಿರುಮಲೆರಾಜಂ** ಒಡ್ಡೋಲಗದೊಳ್ ತನ್ನೆಡಬಲದೊಳ್ ಸಿಂದಿರ್ದಖಿಳ ಪ್ರಭುಗಳೊಳ್ ಕಟಾಕ್ಷಾಮೃತಮಂ ಕವಿಸಿ,—ನಿಮ್ಮ ನಿಮ್ಮ ನಾಡುಬೀಡು ಗಳ ಪದುಳದ ಪರಿಯೆಂತು ?, ಎನಲ್ ; ಒಡನವರನಿಬರುಮೊಂದಾಗಿ ವಂದನಂಗೆಯ್ದು ಒಂದೆ ಸೂಟಿಖೊಳ್ ಮೈಸೂರ **ರಾಜೊಡೆಯ**ರಟ್ಟುಳಿ ಬೆಟ್ಟಿತೆಂದು ಗಾವಳಿಪುದುಂ ; ಆರಾಯಂ ಪಡಿಯಱರ ಮೊಗಮಂ ನಿಟ್ಟಿಸಿ ಅವರಾ ಕಳಕಳಮಂ ಮಾಣಿಸಿ—ಪರಿವಿಡಿಯಿಂದೋರೊರ್ವರೆ ಬಿನ್ನ ವಿಸಿಮೆಂಬುದುಂ ;

ಮೆಯ್ಯಿಕ್ಕಿ **ಕಾರುಗಹಳ್ಳಿಯ** ಮಸಿಂತೆಂದಂ :—ಜೀಯ ! ಕೇಳ್. ಎಮ್ಮ ಪೊಬಲೆಗೆ ಕೇರಿಗಳಾಱು. ದೊರೆಗಳುಮುಱುವರೊಡವುಟ್ಟಿದರಾಕೇ

ರಿಗಳಂ ಪಚರ್ುಗೊಂಡು ಒರೊರ್ವರೋರೊಂದು ಕೇರಿಯೊಳರಸುಗೆಯ್ಯು ತ್ತಿರ್ದವು. ಇಂತಿರ್ಪವುಗೆ ಎಲ್ಲವೊಲದತ್ತಣಿನಾರಾಜನ್ನಪನೊಳ್ ಪಗೆ ತನಂ ಬಳೆದು ಎಡೆವಿಡದೆ ಕಾದುವೆಡೆಯೊಳ್ ಅಂದಂದಿಂಗೆನ್ನೊಡವುಟ್ಟಿ ದರ್ವೈನರ್ ಕಡಿವೆಡೆದು ಮಡಿದರ್. ಆಬಟಿಃಕ್ಕಾನುಮುವನಿಂದಟಿಾವನೇ ನಿಶ್ಚಯಿಸಿ ನಿರ್ಭಯದೊಳವನೆಡೆಗೆ ದೂತರನಟ್ಟಿ—ಇಂದಿನ ಕೊಳಗು ಳದೊಳೆರಟ್ಟಿಡೆಯುಂ ಪೋರದೆ ನೋಡುತಿರ್ಕೆ, ಆವಿರ್ವರೆ ಕಾದುವಂ. ಆಗಳಾನೀಕತ್ತಿಯಿಂ ನಿನ್ನ ನೆತ್ತಿಯನೊತ್ತಿ ಕತ್ತರಿಪೆಂ. ಅದು ತಪ್ಪಿದೊಡೆನ್ನ ನಾಡುಬೀಡುಗಳನೊಪ್ಪಿಸಿ ಕಪ್ಪಡಮನುಟ್ಟು ಕಪ್ಪರೆವಿಡಿದು ಜೋಗಿ ಯಾಗಿ ಪೋಪೆನೆಂದು ಬೆಸಸಿ ಕಳುಪಿದುದಂ ಕೇಳ್ದು ಮಗುಟ್ಟಿವನುಂ- ನೀನೆಂದುದೆಮಗೆ ಸಂಮತಂ. ಆನುಮಿಂದೆನ್ನಯ ಎಡಗೆಯ್ಯ ಚಮ್ಮಟಿಗೆ ಯಿಂದನೆ ನಿನ್ನಮೂಗಂ ಪಱಗಡಿವೆನೆಂದು ಬೆಸಸಿ ಕಳುಪಿ, ಆಗಳೆ ಪಡೆಯು ನೊಡಗೊಂಡು ಬರ್ಪುದುಂ ; ಅನುಮೆನ್ನ ಸರ್ವಬಲದೊಡನೆ ಇದಿರೇಱ ಪೋದೆಂ. ಆಗಳೆರಟ್ಟಿಳಮುಂ ಬೆಱಗುವಟ್ಟು ನಿಟ್ಟಿಸುತಿರುತಿರ್ಪಿನಂ ; ಆವಿ ರ್ವರುಂ ನಾರುವಂಗಳನೇಱ ರಾವುತತನದ ಬಿನ್ನಣಮುಂ ಮೆಱೆಯಲ್ ನಡೆಯಿಪುದುಂ ಕುಣಿಯಿಪುದುಂ ಪಾಯಿಪುದುಂ ಸುತ್ತಿಪುದುಂ ತೊಲಗಿ ಪುದುಂ ದುಮ್ಮಾಳಿಪುದುಂ ತಱುಬುವುದುಮೆಂಬಿವು ಮೊದಲಾದ ಗತಿ ಭೇದಂಗಳಿಂದಿನಿಸುಂ ಪೊಟ್ಟುಗಳೆಯುತ್ತಿರ್ಪಿನಂ; ಆನೊತ್ತರಿಸಿ ಕತ್ತಿಯಿಂ ನೆತ್ತಿಯುಂ ಪೊಯ್ಯಲೊಡನವಂ ತನ್ನ ಬಲಗೆಯ್ಯಲಗಿಂದಣೆದೊಡನೆಡ ಗೆಯ್ಯ ಚಮ್ಮಟಿಗೆಯಿಂದೆನ್ನ ಮೊಗಮುಂ ಪೊಡೆಯೆ, ಮೂಗು ಪಱಿದು ಪರಿಭವಂಬಡೆದೂರ್ಗೆ ವಂದಾಲೋಚಿಸಿದೆಂ :—ಅಕಟೇಘಾತುಕನತಿವೈರ ದಿಂದೆಳೆಯೊಳ್ ನೆಗಟ್ದಿನೆತ್ತ ಬತ್ತೀಸ ಕೈದುಗಳೊಳಂ ಗಣನೆಗೆ ಬಾರ ದೀಚಮ್ಮಟಿಗೆಯಿಂ ಬಡಿದಂ. ಅದಱಿಂದಾಂ ಮುನ್ನಾಡಿದ ಮಾತಿಂಗೆ ತಪ್ಪಿದ ಪಾಪಮನಾದೊಡಮೊಡಂಬಟ್ಟು ಎಂತಾನುಮೀಪಾಡುಪಂತಮುಂ ಮಗುಟ್ಟವೇಟ್ಕುಮೆಂದಿರ್ಪಿನಂ ; ಅನಿತಱೊಳೆ ಎನ್ನೂರಂ ಲಗ್ಗೆಯೇಱ

ಕಟ್ಟಿಱ್ಱಲೆವೀಟ್ಟು ಎನ್ನ ಸರ್ವಸ್ವಮುಂ ಸೂಱೆಗೊಂಡು ಎನ್ನುಮಂ ಕೋಳ್ವೋದನೆಂದು ಜಱಿದು ಪೊಜಮಡಿಸಿ ಯಾಕ್ಷಣದೊಳ್ ಕೋಂಟೆಯಂ ಕೆಡಪಿಸಿ ಔಡಲಮಂ ಬಿತ್ತಿಸಿ ಆವಸ್ತುನಾಹನಂಗಳಂ ದೇಗುಲಂಗಳ್ಗಂ ಪಾರ್ವಗರ್ಗಮಿತ್ತುವೆನ್ನ ನಾಡೊಳ್ ತಲೆವಳ್ಳಿಗಳನಗರಂಗೆಯ್ದಂ. ಆಬಱಿಕ್ಕಾಂ ಪುಗಲೆಡೆಯುಮಂ ಪೊರೆವರಸರುಮಂ ಕಾಣದಿರ್ದೆಂ. ಈಗಳೆನ್ನ ಭಾಗ್ಯೋದಯದಿಂ ನಿಮ್ಮಡಿಗಳಂ ಸಾರ್ದೆಂ. ಎನ್ನಂ ಕಾಯವೇಱ್ಕುಮೆಂದು ಬಿನ್ನವಿಸಿ, ಕಿವಿಯಿಂದಂ ಕಿವಿವರೆಗಂ ಮೊಗದೊಳ್ ಗೆಱೆಗೊಂಡು ಗಂಟುಗಟ್ಟಿ ಮೆಱೆವ ಏಱ ಬಾಸುಱಿಂ ತೋಱಿಸಿ ಪೆಜಸಾರಲೊಡಂ ;

**ಕನ್ನಂಬಾಡಿಯುವ**ನಿಂತೆಂದಂ :—ಜೀಯ ! ರಾಯವಜೀರರೊಳ್ **ರಾಣಾಜಗದೇವರಾಯ**ರಸನಗ್ಗಳನೆಂಬುದು ಚಿತ್ತಕ್ಕೆ ವೇದ್ಯವೈಸೆ ! ಅವನಡಿಗೋಂಟೆಗಳೆಮ್ಮ ನೆರೆಯೊಳಿರ್ಪುವು. ಅವಱೊಳ್ ಪೊಸವೊಱಲಂ ಮೋಸದೊಳ್ ಕೊಳಲೆಂದು ರಾಜನೃಪನೆಮ್ಮೊಳ್ ಸ್ನೇಹಂಬೆರಸಿ ಎಮ್ಮಡೆಯೊಳ್ ನಡೆದು ಆಕೋಂಟೆಯಂ ಬಸಂಗೆಯ್ದಂ. ಅದರ್ಕೆನ್ನ ಕುವರರ್ ಆತನ ಪ್ರಭುಮಂತ್ರೋತ್ಸಾಹಶಕ್ತಿಗಳುಮಂ, ಆತನ ಭೃತ್ಯರೈಕಮತ್ಯ ಭಯಭಕ್ತಿಗಳುಮಂ, ಆತನನುಜರ ಸೌಭ್ರಾತ್ರಸೌಜನ್ಯಸೌಶೀಲ್ಯಂಗಳುಮಂ, ಅವನ ಕುವರರ ಕೂರ್ಮೆಪೆರ್ಮೆಕೂರ್ಪುಗಳುಮಂ, ಅವನ ಸೈನಿಕರ ಶಕ್ತಿಸಾಹಸಶೌರ್ಯಂಗಳುಮಂ, ಆತನೊಳ್ ನೆಲೆಗೊಂಡ ದೈವದೊಲವುಮಂ, ಪಾರ್ವರೆ ಪರಕೆಗಳುಮನಱಿಯದೆ ದುಱುದುಂಬಿತನದಿಂ ಕೆಣಕುಜಗಳಂ ತೆಗೆವುದುಂ ; ಅವನೆಮ್ಮ ನಾಡೊಳ್ ದಾಱಿಟ್ಟು ತುಱುಸೆಱೆಯೊಡನೆನ್ನಣುಗರಂ ಪಿಡಿದು ಬಂಡುಗೆಯ್ದು ಪಾರ್ವಗೊಲೆಗೆ ಪೇಸಿಬಿಟ್ಟು ಎನ್ನ ನಾಡೊಳ್ ತಲೆಯೂರಿಸಿಪ ಬೂಕನಕೆರೆಯಂ ಕೊಂಡು ಅದರ್ಕೆ ಸಲ್ವ ಎಲ್ಲಾ ಪಳ್ಳಿಗಳಂ ಮೋಲ್ಗೋಂಟೆಯ ತಿರುಕುಳಿ ಪಾರ್ವಗಿತ್ತಂ. ಅವರುಮಿಾಗಳೆನ್ನೊಳ್ ದಾಯಿಗರುಂ ದೊರೆಯುಮಾದರ್. ಛಂತುಮಲ್ಲದೆ ಇಂದು ನಾಳೆನೊಳ್ ನಾನಿರ್ಪರಂ ಕೊಳ್ಳದೆ ಮಾಣಂ.

ಇದರ್ಕೆನಗೆ ನೀನೆ ಗತಿಯೆಂದು ಬಿನ್ನವಿಸಿ ತೊಲಗಲೊಡಂ ;

**ತಳಕಾಡವ**ನಿಂತೆಂದಂ :—ದೇವ ! ಬಿನ್ನಪಂ. ಆಜಗದೇವರಾಯ ರಸನ ಪಡೆವಳರೊಳ್ ಮೊದಲಿಗನುಮಿಳೆಯೊಳ್ಬಲ್ಗಯ್ಯನುಮೆಂದು ನೆಗಟ್ದ **ದಟರಾಯನ** ಅಱಕೆರೆಯುಂ ಆತಂ ಪಗಲ್ ಕಟಿಬ್ಗಲೆಯೊಳ್ಕೊಂಡಲ್ಲಿ ಸಿಲ್ಕಿದ ನಲ್ವಚ್ಚಂಗಳನೀಪಶ್ಚಿಮರಂಗನಾಥಂಗೆ ಸಮರ್ಪಿಸಿದುದುಂ, ಪಣಂಗಳಿಂ ಪೊಱವಳಯದ ಕಲ್ಲ ಪಾಗಲಂ ಕಟ್ಟಿಸಿದುದುಮಾಳ್ದನ ಚಿತ್ತವೃತ್ತಿಗೆ ಬಂದಿರ್ಕುಮ್ಮೈಸೆ ! ಬಟೀಕ್ಕಾನೆನ್ನಿರವನಱಿಯದೆ **ಅದಟರಾಯನ** ದುರ್ಯೋಧನೆಗೊಳಗಾಗಿ ಅಱಕೆರೆಯ ನಾಡೊಳ್ ಮಱಪುಯ್ಯಲನೆಸಗುತಿರ್ಪಿನಂ ; ಆರಾಜನೃಪನೆಮ್ಮ ಬನ್ನೂರಂ ಕೊಂಡಂ. ಆರೋಷದೊಳಾಂ ಪೆರ್ವಡೆವೆರಸು ಮಾರ್ಕೊಳೆ, ಅವಂ ಕಿಱಿದು ದಟಿದೊಳಿರ್ದೊಡಮೆಮ್ಮ ಬಲಮುಂ ಲೆಕ್ಕಿಸದೆ ಪೆರ್ಕಳಿಸಿ ಸೊರ್ಕಾನೆಯ ಮೊಕ್ಕಳಮಂ ಪೊಕ್ಕು ಪಾಯ್ದು ಪೊಯ್ವ ಐಮಾಯ ಸಿಂಗದಂತೆಯುಂ, ಪೆರ್ವಟ್ಟಿನ ತಟ್ಟಿನೊಳ್ ನಟ್ಟು ತಟ್ಟುರ್ಚಲೆಜಗುವ ಬಱಸಿಡಿಲಂತೆಯುಂ, ಕಟ್ಟುಱದೊಳುಱುಬಿ ತಱುಬಿ ತಾಗಿ ಕಣೆ ಕೈಯಿಟ್ಟಿ ಪಾಱುಂಬಳೆ ಭಿಂಡಿವಾಳ ಸಬಳ ಭಲ್ಲೆಯ ಕತ್ತಿ ಕಡಿದಾಬೆ ಕಡಾರ ಕೈಗತ್ತಿಗಳಿಂ ಕೊಂದು ಕೊಱಿದರಿದು ನಾಂಟಿಱಿದೌಂಕಿ ಕಡಿದು ಕತ್ತರಿಸಿ ತಿವಿದು ಕೊಯ್ದು ಕೋಟಲೆಗೊಳಿಸಿ ಪೊಕ್ಕಲ್ಲಿ ಪೊಕ್ಕೊಕ್ಕಲಿಕ್ಕಿ ಕಣ್ಗಡಿಸಿ ಕೆಲರಂ ಕೈಸೆಱವಿಡಿದು ಕೈದುಗಳನೀಟ್ಡು ಬನ್ನರಿಬಡಿಸಿ ಬಟೀನೀಗುರ್ಡಿಸಿ ಬವಣಿಗೊಳಿಸಿದಂ. ಅದಂ ನೆನೆದೊಡೆ ಈಗಳುಮೆರ್ದೆಯೊಳದವಟಿಲುಂ, ಮೆಯ್ಯೊಳ್ ನಡುಕಮುಂ, ನುಡಿಯೊಳ್ ತಡಬಡಮುಮಪ್ಪುದು. ಎನ್ನ ರಣಭೀತಿಯಿಂದೆಂದೆಣಿಸತಕ್ಕುದಲ್ತು, ಈನೆರೆದರಸುಮಕ್ಕಳನಿಬರುಮಱಿತಿರ್ಪರ್. ಎನಿತಾನೆಕುದುರೆಕಾಲಾಳ್ಗಳಿರ್ದೊಡಂ ಮಾರ್ಮಲೆವುದರಿದು. ಅವನೊಳ್ ಮಾನಸರ್ಗಳವಡದದೊಂದು ಮ್ಮೈಮೆ ಮೆಯ್ಗೊಂಡಿರ್ಪುದು : ಅದೇಂ ಮಂತ್ರದಿಂದಮೋ, ಮಾಯೆಯಿಂದಮೋ, ಕೈ

ಮೆಯಿಂದವೋ ಕಡುಪಿಂದವೋ, ಬೀರದಿಂದವೋ, ಬಿನ್ನಣದಿಂದವೋ, ಸತ್ವದಿಂದವೋ, ಸಾಸದಿಂದವೋ ! ಮೇಣವಂ ಲಾವಣಿಗೆಯೊಳ್ ತಪ್ಪದೀವ ಕೈಜೀತದೊಳಂ ಕಿಱುಮೆಚ್ಚಿನೊಳ್ಕುಡುವುಡುಗೊಱೆ ಕೊಡಿಗೆನಾರಕಂಗಳೊಳಂ, ಮದುವೆಯೊಸಗೆಗಳ್ಗೆಂದು ಪಸದನಂಗೆಯ್ವ ಪೊಂಗಳೊಳಂ, ಕರೆದು ಲಾಲಿಸಿ ನಂಬಿಸಿ ತಂಬುಲಂಗುಡುವ ಮನ್ನಣೆಗಳೊಳಂ, ಮನನಾಱೆ ಮಾಱುವೋದ ಕೂರಾಳ್ಗಳ ಕೂರ್ಮೆಯಿಂದವೋ ! ಮತ್ತಮೇನಡಿಗಡಿಗೆ ನಡೆದು ಬಗೆಗಱಗಿ ಮೆಯ್ನವಿರುಣ್ಮೆ ಕೆಯ್ಮುಗಿದರೆಗಣ್ಮುಚ್ಚಿ ಕೊಂಡಾಡಿ ಕೊನರ್ದ ಆನಂದಾಶ್ರುವಂ ಕಱೆದಾಳ್ಗೆಯ್ವ ಭಕ್ತಿಯೊಳಂ, ಎಮ್ಮೆಲ್ಲರುಮಂ ಸದೆದೀಟ್ಟು ಕೈಕೊಂಡ ರತ್ನಭೂಷಣಗೆಗಳೊಳಮರ್ದ ದಿವ್ಯರತ್ನಂಗಳಿಂ ತೆತ್ತಿಸಿದ ಕಿರೀಟ ಮಕುಟ ಕುಂಡಲ ಗ್ರೈವೇಯಕ ಹಾರ ಕಟಕ ದಾಮೋದರಬಂಧನ ಕಾಂಚೀಕಲಾಪ ನೂಪುರಾದಿ ದಿವ್ಯಾಭರಣಸಮರ್ಪಣದೊಳಂ, ಎಮ್ಮ ಬಂಡಾರಂಗಳೊಳ್ ಸೂಱೆಗೊಂಡ ಪೊಂಗಳಿಂದೊಡರ್ಚಿದ ಸೋಪಾನ ಗೋಪುರ ಪ್ರಾಕಾರ ವಿಮಾನ ಮಂಟಪ ವಾಹನೋಪವನ ವಾಪೀಕೂಪತಟಾಕಾದಿ ನಿರ್ಮಾಣದೊಳಂ, ಅಂದಂದೆಸಗುವ ಸಂವತ್ಸರಮಾಸಪಕ್ಷನಿತ್ಯನೈಮಿತ್ತಿಕಾದ್ಯುತ್ಸವಂಗಳೊಳಂ ತಣ್ಣನೆ ತಣಿದೊಲ್ದು ಯಾದವಗಿರಿನಾರಾಯಣನ ಕಟಾಕ್ಷಾಮೃತಸೇಕದಿಂದವೋ! ಮತ್ತಮತಿಭಕ್ತಿಯೊಳ್ ಕರೆಯಿಸಿ ಬರಿಸಿ ಯರಮನೆಯ ಮಣಿಪೀಠದೊಳ್ ಕುಳ್ಳಿರಿಸಿ ಮಣಿದಡಿದೊಳೆದಣ್ಪಿಟ್ಟಲರಂ ಸೂಡಿ ನಲ್ಲುಡೆಯಂ ಪೊದೆಯಿಸಿ ತೊಡವಂ ತುಡಿಸಿ ಇಷ್ಟದೇವತೆಯೆಂಬ ಭಾವನೆಯೊಳುಪಚರಿಸಿ ಬೆಳಗೆಯ್ವೊಲಂಗಳಂ ಗರ್ದೆತೋಂಟಂಗಳಂ ಪಳ್ಳಿಗಳಂ ಬೇಳ್ಪ ವಸ್ತುವನಿತ್ತು ಪರಕೆಗೊಂಬುದಱಿಂದೆ ಎಱಕಂಬೆತ್ತ ಪಲಂಬರ್ ಪಾರ್ವರ ಆಶೀರ್ವಾದದಿಂದವೋ ! ತಿಳಿಯದು. ಅವಂ ಇನ್ನೀ ಮೇರೆಯೊಳಿರ್ಪನಲ್ತು. ಗಳಿಗೆಯುರಗಳಿಗೆಯು ಗಣನೆಯೊಳೆ ಪೆರ್ಚಿ ಬರ್ಪಂ. ಅವನಂ ಪಡೆವುದರ್ಕಿದುವೆ ವೇಳೆ. ಈನೆರೆದರಸುಗಳನಿಬರುಂಬೆರಸು ದೇವರೇ

ಬಿತ್ತರವೇಟ್ಟುಂ. ಈರಾಯಗಜ್ಜದೊಳಾಂ ಪಡೆವಳನಪ್ಪೆಂ. ಎನಗಪ್ಪಣೆವೀಳೆ ಯುಮಂ ದಯೆಗೆಯ್ವುದು-ಎಂದು ಮಣಿದು ಬಿನ್ನವಿಸಿ ಸುಮ್ಮನಿರ್ಪಿನಂ;

**ಅಮ್ಮಚವಾಡಿಯುವ**ನೆಟ್ಟು ಕೆಯ್ಮುಗಿದಿಂತೆಂದಂ :—ಸ್ವಾಮಿ! ಈತಳಕಾಡ **ನಂಜರಾಜಂ** ಪಾದಕ್ಕೆ ಬಿನ್ನವಿಸಿದಿನಿತುಂ ನಿಕ್ಕುವಂ. ಆ ಮೈಸೂರವನೊಳತಿಮಾನುಷಶಕ್ತಿಯುಂಟು. ಅದರ್ಕೆ ಕುಱುಪೇನೆಂದೊಡೆ—ಈಯುಗದೊಳಂ ಬೇಟ್ಪರ್ಗೆ ಬೇಟ್ಪುದನೀವ ಶ್ರೀವೇಂಕಟೇಶ್ವರನಿವನ ಮೈಮೆಯನಱಪಲೆಂದೊರ್ವೆ ತನಗೆ ಪರಕೆಗೊಂಡು ತಿರುಪತಿಗೇಟ್ಟಂದ ವಿಪ್ರಕುಲದ ಕಣ್ಬಜಡುವೆಣ್ಗೆ ತಾನೊಂದು ಕಣ್ಣನಿತ್ತು ಪೆಱತೊಂದಂ ಮೈಸೂರ ರಾಜನೃಪನೀವನೆಂದು ಕಳುಪುವುದುಂ; ಈಕೌತುಕವಂ ನಿಟ್ಟಿಸಲೆಂದಾತಿರುಪತಿಯೊಳ್ನೆರದಾಜಾತ್ರೆಯ ನೆರವಿಯೆಲ್ಲಮುಮನಳ ಬೞಿವಿಡಿದೂರ ಮುಂತಣ್ಗೆ ಬರಲೊಡಮಾವಾರ್ತೆಗೇಳ್ದು ರಾಜನೃಪಂ ಮಿಂದು ಮಡಿಯುಟ್ಟು ತನ್ನ ಮನೆಯೊಳ್ನೆಲಸಿ ಮನೆದೇವರೆನಿಪ ಲಕ್ಷ್ಮೀಕಾಂತಂಗಂ ಯದುಗಿರಿಯೊಳ್ನೆಲಸಿ ಯಾದವರಿಂ ಪೂಜೆಗೊಂಡು ತನ್ನ ಕುಲದೇವರೆನಿಸಿದ ನಾರಾಯಣಂಗಂ ತನ್ನೊಳ್ ನೆವಮಿಲ್ಲದೊಲ್ದು ದಯೆಗೆಯ್ದ ಶ್ರೀವೇಂಕಟೇಶಂಗಂ ಮಣಿದಾನೆರವಿಯುಸಿದಿರ್ಗೊಂಡು ಬಲ್ವಂದು ಕೆಯ್ಮುಗಿದು ಬಗೆಯೊಳ್ ಶ್ರೀವೇಂಕಟೇಶ್ವರನ ಭಾವನೆಯುಂ ನೆಲೆಗೊಳಿಸಿ ಆಪಾರ್ವತಿಯುಂ ಕರೆದು,—ಎಲೆ ತಾಯೆ! ಮುಂ ನಿನಗೆ ತಿರುಪತಿಯೊಳ್ನೆಲಸಿದೊರ್ಗಂದು ಕಣ್ಣಿತ್ತಾ ಶ್ರೀವೇಂಕಟೇಶ್ವರನೀಗಳೆನ್ನೆರ್ದೆವನೆಯೊಳ್ ನಿಂದು ಪೆಱತೊಂದು ಕಣ್ಣನಿತ್ತಂ. ಎನ್ನಂ ಕಣ್ದೆಱೆದು ನೋಡು ಎಂಬುದುಂ; ಮುಸುಂಕಿದ ಮುಗಿಲನೊಡೆದು ಮೆಯ್ದೋಱುವ ಪೆಱೆಯಂತೆಯುಂ, ಮಂಜಂ ಕಳೆದು ತೊಳಗುವ ನೇಸಱಂತೆಯುಂ, ತಮಮುಂ ತೞ್ಗಿಸಿ ಪೊಣ್ಮುವ ಸತ್ವಗುಣದಂತೆಯುಂ, ಮಾಯೆಯುಂ ನೀಟ್ಕರಿಸಿ ನೆಗಪ್ವ ತತ್ವಜ್ಞಾನದಂತೆಯುಂ ಎವೆದೆಱೆದು ಮಿಱುಪ ಕಣ್ಣಂ ಕಂಡಾನೆರೆದ ನೆರವಿಯೆಲ್ಲಮುಮಿಾತನಪರಾವತಾರಮೆ ತಪ್ಪು

ದೆಂದು ವಂದಿಸಿ ಪರೆದು ಪೋದುದು. ಇದನೆಲ್ಲರುಂ ಬಲ್ಲರ್. ಅಂದು ಮೊದಲಿವನ ವೈಮೆಗಳ್ಕಿಯೆನ್ನೊರ್ವನನುೞಿದು ಕಟಲೆ ಬಿಳುಗುಲಿ ಬಿಳಿಕೆರೆ ಹುರ ಹುಲ್ಲನಹಳ್ಳಿ ಮೂಗೂರ್ ಮೊದಲಾದ ದೊರೆಗಳವಂಗೆ ಪೆಣ್ಣಿತ್ತು ಕಪ್ಪಮುಂ ತೆತ್ತು ಕೆಳೆಗೊಂಡಿರ್ಪರವರೇಗೆಯ್ವರ್ ? ಅವರೆನಿತರವರ್ ? ಅವರ ಪಾಡೇಂ ? ಅವರ ಪವಣಾವುದು ? ಎನ್ನಂತಪ್ಪಂಗ ಮಸದಳವಾಗಿರ್ಕುಂ. ಇನ್ನೆಂತಾನುಮುಪೇಕ್ಷಿಸತಕ್ಕುದಲ್ತು. ಈಗಳೆ ಪಡೆವಳೆತನಮನೀ**ನಂಜರಾಜಂ**ಗಿತ್ತೆಮ್ಮೆಲ್ಲರ್ಗಂ ನೀಮುಳ್ಳ ಬಲಸನ್ನಾಹಂಬೆರಸೊಡವರ್ಪುದೆಂದಾಣತಿಗೊಟ್ಟು, ಮತ್ತಂ ಸುತ್ತಣರಸುಗಳ್ಗೆ ರಾಯಸಮನಟ್ಟಿ ಕರೆಯಿಸವೇೞ್ಕುಂ. ಇಂತೆನ್ನ ಬಗೆಗೆ ತೋರ್ಪುದಂ ಬಿನ್ನವಿಸಿದೆಂ. ಮೇಗಣೆಸಕಂ ದೇವರ ಚಿತ್ತವೊಪ್ಪಿದಂತು—ಎಂದು ಬಿನ್ನವಿಪುದುಂ ; ಆರಾಯನಂತೆಲ್ಲರ್ಗಮಾಣತಿಯಿತ್ತು ತಾನುಮಿತ್ತಲ್ ತೆರಳ್ದು ಬರ್ಪುದರ್ಕೆ ಸನ್ನದ್ಧಮಾಗಿರ್ದಪಂ. ಈವೇಳೆಗೇನುಚಿತಮೋ ದೇವರ ಚಿತ್ತಮೆ ಬಲ್ಲುದು—ಎಂದು ಕಂಡುದಂ ಬಿನ್ನವಿಸಿ ಕೆಯ್ಯೋಲೆರ್ದ ಬಿನ್ನವತ್ತಳೆಯುಮ ಪಡಿಯಜಂಗಿತ್ತು ಕೆಯ್ಮುಗಿದು ಬೀೞ್ಕೊಂಡು ಪೋಪುದುಂ;

ಅರಸನ ಕಣ್ಸನ್ನೆಯಿಂ ರಾಯಸಿಗನದಂ ಕೊಂಡು ಮುದ್ರೆಯನಪ್ಪಣೆವಿಡಿದು ಸಡಿಲ್ಚಿ ತೆಗೆದೋದಿದಂ :—

" ದೇವರಡಿಗೆ ಬಿನ್ನಪಂ. ಆಂ ದೇವರ ಪಾದದತ್ತಣಿಂ ಬೀೞ್ಕೊಂಡು ನಡೆತಂದಿ ಪಟ್ಟಣದ ಪೊಱವಳಯದುಪವನದೊಳಿರ್ಪಿನಂ ; ಅವರೆನ್ನನಿದಿರ್ವಂದೊಡಗೊಂಡುಯ್ವುದರ್ಕೆ ಪೊರ್ದುಗೆಯ ಗುಜ್ಜಾನನೊರ್ವನಂ ಕಳುಪಿ ಕರೆಯಿಸಲೊಡಮಾನುಮರಮನೆವೊಕ್ಕು ರಾಯನಂ ಕಂಡು ಕೈಗಾಣ್ಕೆಗೊಟ್ಟು ಕುಳ್ಳಿರ್ಪಿನಂ ; ಆ ರಾಯಂ ದೇವರಡಿಯ ಪದುಳಮಂ ಬೆಸಗೊಳೆ—ದೇವ ! ಕೇಳ್, ಎಮ್ಮಾಳ್ದಂ ಯಾದವಗಿರಿ ನಾರಾಯಣನ ಕರುಣಾಕಟಾಕ್ಷದತ್ತಣಿಂ ದಾನಕ್ಷಾತ್ರನಿರತನೆನಿಸಿ ಕ್ಷೇಮದೊಳಿರ್ಪಂ. ದೇವರಿಲ್ಲಿಗೆಯ್ತಂದುದರ್ಕೆ ಪೆರ್ಚಳಿಸಿ ದೇವರ ಕುಶಲ

ಮಂ ತಿಳಿಯಲ್ಬಾವುದನುಂ ಕೊಟ್ಟೆನ್ನಂ ಕಳುಪಿದರ್ ಎಂದು ಮುಂದಿ ಡುವುದುಂ; ಅದಂ ಕೊಂಡು ಸಂತಸಂಬಟ್ಟು ತನ್ಮೈಮ್ಮೈ ನೇಹಂ ಬಳೆವುದರ್ಕೆ ಇದು ನಾಂದಿಯೆಂದೆನಗೆ ಉಡುಗೊರೆಗಳ ವೀಳೆಯಂಗಳನಿತ್ತು, ಬೀಡಾರಕ್ಕೆ ಕಳುಪಿ, ಉಲುಪೆಯುಚಿತಂಗಳಿಂದುಪಚರಿಸಿ, ಪೆಱತೊಂದು ದಿನಂ ಒಳಓಲಗಕ್ಕೆ ಕರೆಯಿಸಿ, ಕೆಲವುಂ ಪೊೞ್ತುಷ್ಟಾಲಾಪದೊಳಿರ್ದು ಬೞಿಕೆನ್ನ ಮೊಗಮುಂ ನೋಡಿ— ನಿಮ್ಮಾಳ್ದನವತರಿಸಿದುದಱಿಂದೇೞ್ಗೆವೆತ್ತೆಸೆವ ವಂಶಮಾವುದು? ಆಚಾರದ ಪರಿಯಾವುದು? ವಯಸ್ಸೆನಿತು? ಮೆಯ್ಸಿರಿಯೇತೆಱಂ? ಸೋದರರುಂ ಸುತರುಮೆನಿಬರ್? ಆಳ್ವ ನಾಡೆನಿತು? ಆನೆಕುದುರೆಯಾಳ್ಗಳೆನಿತು? ಆಯುವ್ಯಯದ ನೆಲೆಯಾವುದು? ಎಂದು ಬೆಸಗೊಂಬಿನಮಾಂ ಬಿನ್ನವಿಸಿದೆಂ:—ದೇವ! ಚಂದ್ರವಂಶದೊಳವತರಿಸಿದ ಯದುಭೂಮಿಪನ ಕುಲಭೂಷಣರೆನಿಪ ಬಲಕೃಷ್ಣರಿರ್ವರುಂ ಕುಲದೇವರಂ ಬಲಂಗೊಳಲೆಂದು ಯಾದವಗಿರಿಗೆೞ್ತಂದು ಅಲ್ಲಿ ನಾರಾಯಣಂಗೆ ಮಹೋತ್ಸವಮನೊಡರ್ಚೆ ವೈರಮುಡಿಯೆನಿಪ್ಪ ದಿವ್ಯ ಕಿರೀಟಮುಂ ಸಮರ್ಪಿಸಿ ಮಗುೞ್ದು ತಾಂ ದ್ವಾರಕಿಗೆ ಪೋಪಾಗಳ್, ಈ ಕ್ಷೇತ್ರಮುಂ ಕಾಪಿಟ್ಟು ಸಕಲವಿಧಸೇವೆಗಳಂ ನಡೆಯಿಪುದರ್ಕೆ ತಮ್ಮ ಕುವರರೊಳ್ ಒರ್ವನನಿಟ್ಟು ಪೋಪಿನಂ, ಆಯದುಭೂಷಣಂ ತನ್ನ ಕರಿ ತುರಗ ಪದಾತಿಗಳ್ವೆರಸು ತಾನಾವಗಮಲ್ಲಿರ್ದೊಡೆ ಶ್ರೀಮನ್ನಾರಾಯಣನ ನಿತ್ಯಕಿಂಕರತೆಯೊಳಿರ್ಪ ವೈಷ್ಣವಜನಕ್ಕಂ ತರುಗುಲ್ಮಲತಾದಿರೂಪದೊಳಿರ್ಪ ನಿತ್ಯಮುಕ್ತರ್ಗಮುಪರೋಧಮಪ್ಪುದೆಂಬುದಱಿಂ

ಶ್ಲೋಕ॥ ವೈಕುಣ್ಠವರ್ಧನಂ ನಾಮ ಕ್ಷೇತ್ರಂ ತತ್ಸತ್ಯಮುಚ್ಯತೇ।
ಪ್ರಮಾಣಂ ತಸ್ಯ ವಿಜ್ಞೇಯಂ ಪರಿತೋ ಯೋಜನದ್ವಯಂ॥

ಇಂತೆಂಬ ನಾರದೀಯವಚನದಿಂದೀಕ್ಷೇತ್ರಮುಂ ಬಳಸಿದೆರಡಾವುದ ನೆಲನುಂ ವಿಷ್ಣುಕ್ಷೇತ್ರಮಾದುದಱಿಂದೀಮೈಸೂರೊಳರಸುಗೆಯ್ಯುತ್ತಿರ್ದಂ. ಅವನ ಸಂತತಿಯೊಳ್ ಪುಟ್ಟಿ ನೆಗೞ್ತೆವೆತ್ತ ಬೆಟ್ಟದ

ಚಾಮರಾಜಂಗೆ ತಿಮ್ಮರಾಜ ಕೃಷ್ಣರಾಜ ಚಾಮರಾಜರೆಂಬ ಮೂವರಣುಗರಾದರ್. ಆಚಾಮರಾಜನ ತಪಃಫಲಮೆನಿಸಿ ನೆಗೞ್ದಸವೀರಾಜಭೂಪಾಲಂ ಪುಟ್ಟಿದಂದಿಂದೆಯುಂ ಪುಸಿವಾತು ಪೆಱರೊಡವೆ ಪೆಣ್ಡಿರ ನೆನಸಿಲ್ಲದೆಳವೆಯೊಳ್ ಶಾಸ್ತ್ರಶಸ್ತ್ರಾಭ್ಯಾಸದೊಳ್ ಜೌವನದೊಳ್ ದಿಗ್ವಿಜಯವ್ಯಾಪಾರದಿಂದಿರ್ಪುದಱಿಂ ಬೆಸನಂಗಳ್ಗೆ ಪೊೞ್ತುಗುಡದೆ ನಿಚ್ಚಮುಂ ಸ್ನಾನಸಂಧ್ಯಾಜಪದಾನದೇವಪೂಜಾಪುರಾಣಪುಣ್ಯಕಥಾಶ್ರವಣಾದಿ ಪಾರಲೌಕಿಕವ್ಯಾಪಾರಮುಮಂ ಷಾಡ್ಗುಣ್ಯಚಿಂತನ ಪ್ರಜಾಪರಿಪಾಲನ ಕಂಟಕಶೋಧನಾದಿ ರಾಜ್ಯವ್ಯಾಪಾರಮುಮನೊಂದಱಿಂದೊಂದಂ ಸಡಿಲ್ಚದೆ ಸಂತಸದೊಳಿರ್ಪಂ. ಈಪರಿಯಿಂ ಬಗೆಯೊಳ್ ಮೆಯ್ಗೊಂಡ ಸತ್ವಗುಣಂ ಪೊಱಪೊಣ್ಮಿದಂತೆಯುಂ, ಅಱುವತ್ತುಂ ಬರಿಸಮುಂ ಬೆಳ್ಗೊಡೆಯ ನೆೞಲೊಳಿರ್ದುದಱಿಂದಾಬೆಳ್ಗದಿರ್ ಮೆಯ್ವೆತ್ತಿದಂತೆಯುಂ, ಮೂಜಗಮಂ ಪರ್ಬಿದೊಳ್ಜಸವಳ್ಳಿ ಪೊಸವೇರ್ವೆತ್ತಂತೆಯುಂ, ಮೊಗಸಸಿಯಿಂ ಪಸರಿಪ ಜೊನ್ನದ ಜೊಂಪದಂತೆಯುಮೆಸೆವ ನರೆವೊತ್ತಿರ್ದೊಡಂ ಪೊಸಮಿಸುನಿಯೊಳ್ ಕರುವಿಟ್ಟಿಱಿದಂತೆಯುಂ, ಕಂಡರಿಸಿದಂತೆಯುಂ, ಬಟ್ಟಿತ್ತಾದ ತೋಳ್ಕಡುತೊಡೆಗಳಿಂ ಪೇರೆರ್ದೆಯಿಂ ಬಲ್ಗಂದದಿಂ ಬೆಟ್ಟಿತ್ತಾದ ಮೆಯ್ಯಿಂ ವೃಷಭದಂತೆಯುಂ ಪುಲಿಯಂತೆಯುಂ ಸಿಂಗದಂತೆಯುಂ ಮೆಯ್ಸಿರಿವಡೆದಿರ್ಪಂ. ಬೆಟ್ಟದ ಚಾಮರಾಜ, ದೇವರಾಜ, ಚೆನ್ನರಾಜರೆಂಬ ಮೂವರ್ ಸೋದರರ್ ವೇದತ್ರಯದಂತೆ ಧರ್ಮಸಾಧಕರುಂ, ತ್ರಿವರ್ಗದಂತೆ ಸುಖಸಾಧಕರುಂ, ಶಕ್ತಿತ್ರಯದಂತೆ ವಿಜಯಸಾಧಕರುಂ ಕರಣತ್ರಯದಂತೆ ಕಾರ್ಯಸಾಧಕರುಮೆನಿಸಿ ಮೂವರೊಂದಾಗಿ ಮುಪ್ಪುರಿಗೊಂಡಂತಾತನಾಣತಿಯೊಳಿರ್ಪುದೇ ಶೀಲಮೆಂದಾತಂಗಾಳ್ಗೆಯ್ವುದೇ ಒಳ್ಗಜ್ಜಮೆಂದಾತನ ಹಸಾದಂಬಡೆವುದೇ ಪರಮಲಾಭಮೆಂದಿರ್ದಪರ್. ನರಸರಾಜ ಇಮ್ಮಡಿರಾಜರೆಂಬಣುಗರ್ ಪಡಿನೆೞಲಂತೆ ಆ ಗುಣಂಗಳಂ ಪಡೆದಾತನ ಬೞಿಸಲ್ವರ್. ಈಸೋದರರುಂ ಸುತರುಂ ಬೆರಸು

ತಮ್ಮ ಕುಲಕ್ರಮಾಗತದ ಮೈಸೂರ್ಗೆ ಸಲ್ವಿರ್ಪತ್ತುಮೂಱು ಮಱಿವಳ್ಳಿಗಳೊಳಿತ್ತು ಬರ್ಪ ಮೂಸಾಸಿರ ಪೊನ್ನಂ ಮುನ್ನೂಱಾಳ್ಗೆ ಪಚರ್ಗೊಟ್ಟಡಬಲದ ಮನ್ನೆಯರಿಂ ಬರ್ಪ ಕಪ್ಪದೊಳಮವರ್ ಮಿಸುಕದಂತವರವರ ನಾಡೊಳ್ ಬಸಂಗೆಯ್ದುರ್ಪ ತಲೆವಳ್ಳಿಗಳಿಂ ಬರ್ಪ ಕಂದಾಯದೊಳಂ ಮನವಾರ್ತ್ತೆಯುಮಂ ನಿತ್ಯದಾನಧರ್ಮಂಗಳುಮಂ ಮದುವೆಯೊಸಗೆಗಳುಮನುಡುಗೊಱೆಯುಚಿತಂಗಳುಮನೆಸಗುತ್ತಿರ್ದಪರ್. ಇದುಮಲ್ಲದೆ ಇದಿರಾದರನೊಕ್ಕಲಿಕ್ಕಿ ಸೆಳೆದು ತಂದ ವಸ್ತುವಾಹನಂಗಳಂ ದೇವಬ್ರಾಹ್ಮಣರ್ಗಿತ್ತು ಅವರೊಲವನೇ ಧನವಾಗಿ ಸಂಗ್ರಹಿಸಿರ್ಪರ್—ಎಂಬುದುಂ; ಅದರ್ಕೆ ಸಂತಸಂಗೊಂಡು ಕೊಂಡಾಡಿಯುಂತಪ್ಪ ಪುಣ್ಯಪುರುಷನಂ ನಿಟ್ಟಿಸಿ ನುಡಿಸಿ ಕೆಳೆಗೊಂಡು ನಂಬಿ ನೇಹಂಬೆರಸಿರ್ಪರೊಂದೆನಿಸಿಯೊಡರ್ಚುವ ಕಜ್ಜಮೆನಿತಾನುಮುಂಟೆದಱಿಂ ತಾಮಿಲ್ಲಿಗೆ ಬರ್ಪುದರ್ಕಮಾವೆ ತೆರಳ್ದೇಱಿರವೇಳ್ಕುಮೆಂಬುದರ್ಕಂ ಬರೆಯಿಸಿ ಕಳುಪಿ ನಿಶ್ಚಯುಮಂ ತಿಳಿದು ಬೇಗದೊಳೆಮಗಱಿಪುವುದೆಂದೆನಗುಡುಗೊಱೆವೀಳೆಯಂಗಳನಿತ್ತು ಕಳುಪಿದರ್. ಆಬೞಿಕ್ಕೆ ಮತ್ತೊಂದು ದಿವಸದೊಳ್ ತಮ್ಮ ಸಾಮಾಜಿಕರುಮಂ ತಮ್ಮಂ ಕಂಡೋಲಗಿಪರುಮಂ ಕರೆಯಿಸಿ—ಮೈಸೂರವನೊಳಾಮೇತೆಱದಿಂ ವರ್ತಿಸವೇಳ್ಕುಮೆಂದು ಬೆಸಗೊಳ್ವನಂ ಅವರನಿಬರುಂ ದೇವರೆಸಗುವುಪಟಳದಿಂ ನೊಂದು ಬೆಂದಿರ್ಪುದಱಿಂದೀವೇಳೆಯೊಳವನಂ ಬೆಂಬಲಂಗೊಂಡನಿಬರುಮೊಟ್ಟಾಗಿನ್ನೊರ್ಮೆ ಸರ್ವಶಕ್ತಿಯೊಳ್ ಪೊಣರಲ್ಕಾತನಂ ದಟ್ಟಿಗಟ್ಟಿಸಲೆಂದು ದೇವರ್ ತಮ್ಮೊಳೆಸಗಿದ ಪರಿಭವಮುಮನವನೊಳ್ ನಡೆಯಿಪೌದಾಸೀನ್ಯಮುಮಂ ಬಿನ್ನವಿಸಿ ಕಿವಿಗೊಳಿಸಿ,—ಒಡಲೊಳೆಡಱಂ, ಪಾಸಿನೊಳ್ ತೇೞಂ, ಮಗ್ಗುಲೊಳ್ ಪಾವಂ, ಮನೆಯೊಳ್ ಮಾರಿಯುಮೂರೊಳ್ ಪುಲಿಯಂ ಪುಗಿಸಿ ಬಾೞ್ವಂತೀ ಮೈಸೂರವನ ನೆರೆಯ ಬಾೞ್ಕೆಯೆಂದು ಬೋಧಿಪುದುಂ; ಅವನುಮ್ಮುದಂ ನನ್ನಿಯೆಂದು ಬಗೆದು,-ಎಂತಾನುಮೀ ಕಜ್ಜಮಂ ಸಾಧಿಪಂ. ಒಳ್ಳಿ

ತಿನಿಂದವನಿಲ್ಲಿಗೆಯ್ತಂದೊಡವನಂ ಪಿಡಿದು ಬಂಧಿಪಂ. ಅಂತಲ್ಲದಿರ್ದೊಡೆ ದಂಡೆತ್ತಿ ಪೋಗಿಯೂರಂ ಮುತ್ತಿ ಲಗ್ಗೆಯೇಱಿ ಕೈಸೆಱೆವಿಡಿದು ತರ್ಪಂ. ಇದರ್ಕೆ ಸಾಧಕವಾಗಿ ಮಾನೌಮಿಯೊಸಗೆಯ ನೆವದಿಂ ನೀವೆಲ್ಲರುಂ ದೞಂಬೆರಸೇೞ್ತರ್ಪುದೆಂದು ಕಳುಪಿದರ್ಗಳ! ಆಬೞಿಕ್ಕೆ ಕಿಱಿದುಂ ದಿವಸದೊಳೆ ಮುಂಗಾರೊಳ್ತೆರಳ್ದೇೞ್ತರ್ಪ ಮುಗಿಲ ಮೋಹರದಂತೆಯುಂ, ಮೞೆಯೊಳ್ತುಂಬಿ ಬರ್ಪ ಪೆರ್ವೊೞೆಗಳಂತೆಯುಂ, ಪ್ರಳಯವೇಳೆಯೊಳ್ವೇಲೆಯಂ ಕೈಗಣ್ಮಿ ಕವಿದು ಸಾರ್ತರ್ಪ ಕಡಲ ಗಡಣದಂತೆಯುಂ, ದೆಸೆದೆಸೆಯಿಂ ನಡೆತಂದು ನೆರೆದ ಪೆರ್ದೞಿಮೂರ ಮುಂತಣ ವೈಯಾಳಿಯ ಬಯಲೊಳಂ ಪೊೞೆಯ ತಡಿಯ ತೋಪುಗಳೊಳಮಿೞಿದಿರ್ದಪುದದಂ ಲಾವಣಿಗೆಗೊಳಲೆಂದು ರಾಯನೊರ್ವಗಲೂರ್ವಾಗಲುಪ್ಪರಿಗೆಯನೇಱಿ ಬಲಮಂ ನೋೞ್ಪಲ್ಲಿ—ಬಳ್ಳಾಪುರ ಕೋಳಾಲ ಪುಂಗನೂರ್ ಮಾಗಡಿ ಬೆಂಗಳೂರ್ ಮೊದಲಾದ ಮೊರಸುನಾಡ ಮೋಹರದೊಳೆರ್ಪತ್ತಾನೆಯುಂಚಾರ್ಛಾಸಿರ ಕುದುರೆಯುಂರ್ಪತ್ತುಸಾಸಿರಾಳ್ಗಳುಂ, ತಳಕಾಡೆಳವಂದೂರಮ್ಮ್ರಚನಾಡಿ ತೆರಕಣಾಂಬಿಕೋಂಟೆ ಮೊದಲಾದೊಳನಾಡದೞಿದೊಳಿರ್ಪೈದಾನೆ ಐನೂಱು ಕುದುರೆಯಿರ್ಪೈದು ಸಾಸಿರಾಳ್ಗಳುಂ, ಕೞಲೆ ಬೇಲೂರ್ ಕೆಳದಿ ಮೊದಲಾದ ಮಲೆನಾಡ ಬಲದೊಳೆರ್ಪತ್ತಾನೆಯಿರ್ಛಾಸಿರ ಕುದುರೆ ಇಪ್ಪತ್ತುಸಾಸಿರಾಳ್ಗಳುಂ, ಚಿಂತನಕಲ್ ಚಿಕನಾಯಕನಹಳ್ಳಿ ಬಾಣಾವಾರ ಬಸವಪಟ್ಟಣ ಸೀರೆಯಂ ಮೊದಲಾದ ಬೇಡವಡೆಯೊಳ್ಳೈದಾನೆಯ್ಯೈನೂಱು ಕುದುರೆಯಿರ್ಪೈದು ಸಾಸಿರಾಳ್ಗಳುಂ, ರಾಣಾಜಗದೇವು ಕೆರೆಯೂರ ತಿಮ್ಮನಾಯಕಂ ಮೊದಲಾದ ರಾವುತಪಾಯಕರೊಳ್ ಪದಿನೈದಾನೆ ನಾಲ್ಸಾಸಿರ ಕುದುರೆಯುಂರ್ಪತ್ತು ನಾಲ್ಸಾಸಿರಾಳ್ಗಳುಂ, ಮೂಲಬಲದೊಳ್ ಮೂವತ್ತಾನೆ ಮೂಸಾಸಿರ ಕುದುರೆ ಮೂವತ್ತು ಸಾಸಿರಾಳ್ಗಳುಂ ಅನಿತುಂ ಕೂಡಿ ನೂಱಾನೆಯಿರಾಱು ಸಾಸಿರ ಕುದುರೆ ಲಕ್ಕ (?) ಪಾಯಿದೞಿಮಾಯ್ತೆಂದು ಲೆಕ್ಕಿಗಂ ಬಿನ್ನವಿಸೆ—

ೀಳ್ದಿಲ್ಲರ್ಗಂ ವೀಳೆಯಂಗಳನಿತ್ತುವರವರ ಪಾಳೆಯಕ್ಕೆ ಕಳುಪಿ, ತಾವು ುರಮನೆಗೆ ಬಂದು, ತಮ್ಮ ಪಡೆವಳನಂ ಕರೆದು, ಪಯಣಸನ್ನದವೆಲ್ಲವು ುನೆಸಗೆಂದು ನಿರವಿಸಿ ಕಳುಪಿದಂ. ಅಂದು ಮೊದಲ್ ಗುಡಿ ಗೂಡಾರ ೂಟ್ಟಿಗೆ ಕಟಾರ ಬಾಣ ಬತ್ತಿ ಮೊದಲಾದುದಂ ದೊರೆಕೊಳಿಪುದುಮಾನೆ ುದುರೆಯಾಳ್ಗಳಂ ಲಾವಣಿಗೆಗೊಂಬುದುಮಾಗಿರ್ದಪರ್. ಇದೀಗಳ್ ಡೆದ ನಡತೆ. ಮುಂತೆ ನಡೆವುದರ್ಕಂದಂದಿಗೆ ಬರೆದು ಬಿನ್ನವಿಸಿ ಕಳುಪುವೆಂ. ದಂ ದೇವರ ಚಿತ್ತಕ್ಕೆ ತಂದು ಆನಿವರೊಳ್ ವ್ಯವಹರಿಪುದರ್ಕೆನಗೆ ತಿಳಿ ಂತೆ ನಿರವಿಸಿ ರಾಯಸಮಂ ದಯೆಗೆಯ್ವುದು. ಇದಱಿಂಳೀನಾನುಂ ಯ್ಯೋಸಬಾಯ್ಯೋಸಂಗಳುಳ್ಳೊಡನೊಲ್ಮೆಯಿಂ ಸ್ಯೆರಿಪುದು—ಎಂದೋದಿ ೀರ್ವುದುಂ ;

ಆರಾಜನ್ಯಪನೀವಿಷಯದೊಳಾವೆಂತು ವರ್ತಿಸವೇಳ್ಕುಮೆಂದ ುಜರ ಮೊಗಮಂ ನೋಡಿ ನುಡಿಪುದುಂ ;

**ಬೆಟ್ಟದ ಚಾಮರಾಜಂ**—ಎಲೆ ಜೀಯಾ! ಕೇಳೀಗಳೆಮಗೆ ಂದ ಕಜ್ಜವಾವುದು? ಇದರ್ಕೆ ಯೋಚಿಸತಕ್ಕುದೇಂ? ಸಂತೆಯ ಂದಣಿಯಂತೆಯುಂ, ಜಾತ್ರೆಯ ಜಂಗುಳಿಯಂತೆಯುಂ, ಅಗರದ ಾರ್ವರೊಟ್ಟಿಗನಂತೆಯುಂ, ಪರದರ ಪಾಳೆಯದಂತೆಯುಮೊಕ್ಕಲಿಗರ ೊಕ್ಕಳದಂತೆಯುಂ, ಮಿಗವಿಂಡಿನಂತೆಯುಂ, ಕಾಗೆಯ ಬಳಗದಂತೆ ುಂ, ಕಪ್ಪೆಯ ಕುಂಪೆಯಂತೆಯುಂ, ಕೈಪಱಿಗೆ ಬೆದಱಿ ಪರಿ ೋಡುವ ತೆಲುಂಗವಡೆಯಂ ಕಡಿದಟ್ಟುವುದರ್ಕೆ ದೇವರಡಿವರೆಗಂ ುರ್ಪುದೇನಿರ್ಕುಂ? ತಕ್ಕುಮಿಕ್ಕೆಮ್ಮವಂದಿಗರ್ಗಾಣತಿಯಿತ್ತು ಕಳುಪು ರುದು,—ಎನಲೊಡಂ ;

ವಿನಯಂಬೆರಸು ಕೆಯ್ಮುಗಿದು **ದೇವರಾಜಂ**—ಜೀಯ! ಿನ್ನಪಂ. ಕಿಱಿಯರಸರ್ ಬಿನ್ನವಿಸಿದುದೆ ನನ್ನಿ. ಅಂತಾತೊಡಮುರ ುಗಳ್ ಗೆಲ್ಲಂಗೊಂಬೆಡೆಯೊಳ್ ಮೊತ್ತಮೊದಲನುವೇಳ್ಕುದುಂ ಕುಡು

ವುದುಂ ಪಗೆವರೊಳೋರೊರ್ಬರಂ ಬೇರ್ಪಡಿಸುವುದುಮೆಂಬೀಮೂಱುಮುಪಾಯಂಗಳನೆಸಗಿಯುಂ ಇವಱೊಳ್ಬಸಮಾಗದುದರ್ಕೆ ಕೊಳುಗುಳಮನೊಡಂಬಡುವರ್. ಅಂತಾಮುಂ ಮನದೊಳ್ ಕಡುಕೇಣಂಗೊಂಡಿರ್ಪುದಱಿಂದೊಳ್ಪಾತಿನೊಳಂ ಕಟ್ಟೈಸಿರಿಯೊಳಿರ್ಪುದಱಿಂ ಕೋಡಿನೊಳಂ ಬೆರಸಿರ್ಪುದಱಿಂ ಬೇರ್ಪಡಿಸುವುದಱೊಳಂ ಬಸಮಾಗರೆಂದು ತಿಳಿದಿರ್ದೊಡಂ ಲೋಗರಂ ಮೆಚ್ಚಿಸವೇೞ್ಪುದು. ಆನಱಿತೊಡಮಱಿಯದಿರ್ದೊಡಂ ಭಕ್ತಿಯಿಂ ಬಿನ್ನವಿಸಿದೆಂ. ಎನ್ನ ನುಡಿಯಂ ಲಾಲಿಸಿ ಚಿತ್ತಂ ಬಂದಂತೆ ನಡೆಯಿಪುದು. ಎಮ್ಮೊಳ್ ಕೇಣಮಾಪ್ರಭುಗಳ್ಗಲ್ಲದಾರಾಯಂಗಿಲ್ಲ. ಆಮವನಂ ಗಣಿಸದಿರ್ಪುದಱಿಂದವರ್ಗೊಳಗಾಗಿರ್ದಪಂ. ಆನೊಳ್ಪುದೋಱಿದೊಡೆಮ್ಮೊಳ್ಬೆರಸುವಂ, ಎಮ್ಮ ನೇಹಮನೇ ಪರಮಲಾಭಮೆಂದೆಣಿಸಿಯೆಮ್ಮನಾದರಿಸಿ ಮನ್ನಿಸಿ ತೇಜಂಗೆಯ್ವಂ. ಆಗಳೀ ನೆರೆದ ನೆರವಿ ಮುಱಿದು ಪರೆದು ಪೋಪುದು. ಆಬೞಿಕ್ಕಾಮುಂದಂದಿನೌಚಿತ್ಯಮನಾರಯ್ದು ನಡೆಯಲ್ ಬರ್ಕುಂ. ಅದಱಿಂದೀಗಳ್ ಪಟ್ಟಣಕ್ಕೆ ಬರೆಯಿಸಿ ಕಳುಪುವಲ್ಲಿ— " ತಮ್ಮೆಮ್ಮ ನೇಹಂ ಪಿರಿಯರ ಕಾಲದಿಂ ಬಂದುದಲ್ಲದೆ ಪೊಸತಲ್ತೈಸೆ ! ತಾಮಿಲ್ಲಿಗೆಯ್ತರ್ಪುದರ್ಕಮಾಮಲ್ಲಿಗೆ ಬರ್ಪುದರ್ಕಂ ಎರವಾವುದು ? ತಾಮುಂ ದೂರದೇಶದಿಂ ಬಂದು ಬೞಲ್ದಿರ್ಪುದಱಿಂದಾಮೆ ನಡೆತರ್ಪೆವು. "—ಎಂದು ಬರೆಯಿಸಿ ಕಳುಪುವಂ. ಇಲ್ಲಿ ಮೈಸೂರ ಕೆಸಱಿಯ ಕೋಂಟೆಯಗೞಾಳ್ವೇರಿಗಳನಾರಯ್ದು ಪೊಱವಳಯದ ಮಱತೆಱಗಳಂ ತೆಗೆಯಿಸಿ ಸಕಲಸಂವರಣೆಗಳಂ ದೊರೆಕೊಳಿಪುದರ್ಕೆ ಕಿಱಿಯರಸರಂ ಪೊಸಆಳ್ಗಳಂ ಲಾವಣಿಗೆಗೊಂಬುದರ್ಕೆ **ಚಿನ್ನರಾಜ**ರುಮನಿರಿಸಿ ದೇವರುಮೆನ್ನ ಸೇನೆಯ ಕೂರಾಳ್ಗಳನೊಡಗೊಂಡು ಪೊೞವರೆಗಂ ಪೋಗಿ ಸಿಂದಲ್ಲಿಯುವನಲ್ಲಿಗಿದಿರ್ವಂದನಾದೊಡಾಮೇರೆಗೆ ಸೈರಿಸಲಾಱದೆ ನೆರೆದ ಕಿಱುದೊರೆಗಳೆಲ್ಲರುಮಾಗಳೆ ಕೈದೆಗೆವರ್. ಆಮುಂ ಪಟ್ಟಣಕ್ಕೆ ಪೋಗಿ ದೇವರ್ಕಟ್ಟಿಸಿದ ಪಶ್ಚಿಮರಂಗನಾಥನ ದಿವ್ಯ

ಮಂಟಪಪ್ರಾಕಾರಂಗಳಂ ನಿಟ್ಟಿಸಿ ರಂಗೇಶಂಗೆಱಗಿ ತೀರ್ಥಪ್ರಸಾದಂಗೊಂಡು ಕೃತಾರ್ಥರೆನಿಸಿ ಬರ್ಪಂ. ಮೇಣವನಿದಿರ್ಗೊಳ್ಳದಿರ್ದೊಡವನೊಳ್ ತಪ್ಪಂ ಪೊಱಿಸಿ ಬರ್ಪಂ.—ಎಂದು ಬಿನ್ನವಿಪುದುಂ;

ರಾಜನೃಪನದಂ ಮನದೆಗೊಂಡು ಕಿಱಿಯರಸನ ಮೊಗಮಂ ನೋಡಿ—ಬೆಟ್ಟದಯ್ಯ! ಕೇಳೀದೇವರಾಜಂ ನುಡಿದಂತೆ ನಡೆಯಿಸಿ ನೋಳ್ಪಂ. ಇದಱೊಳ್ ತಪ್ಪಿಲ್ಲವೆಂಬುದುಂ; ಜೀಯ! ಹಸಾದವೆಂದೊಡಂಬಡೆ, ಪಟ್ಟಣಕ್ಕೆ ರಾಯಸವಂ ಕಳುಪಿದಂ.

ಇಲ್ಲಿಯಾತಿರುಮಲೆರಾಜಂ ಮಱುವಗಲ್ ಮೈಸೂರ ನಿಯೋಗಿ ತಂದೋದಿಸಿದೋಲೆಯಭಿಪ್ರಾಯಮಂ ತಿಳಿದು, ತಮ್ಮವರಂ ನೋಡಿ—ಕಡಲೊಳ್ ಸೊದೆಯ ಪೆಂಪುಂ, ಚಂದಿರನೊಳ್ ಕದಿರ ತಣ್ಪುಂ, ಸುಗ್ಗಿಯೊಳಲರಲಂಪುಂ, ತೆಂಬೆಲರೊಳ್ ಬಾವನ್ನಗಂಪುಂ, ಕುಲೀನನೊಳೊಳ್ಗುಣದ ಗುಂಪುಂ ಇರ್ಪುದಚ್ಚರಿಯಲ್ತು. ಆದೊಡಮಿವನೊಳ್ ಬೀರಮುಂ ವಿನಯಮುಂ ತಮ್ಮೊಳ್ ತಾಂ ಕೇಣಮುನುೞಿದು ಕೆಳೆಗೊಂಡಿರ್ಪುವು. ಇವನ ನೇಹದೊಳಪ್ಪ ಕಜ್ಜಮೆಮಗಿವನ ಬೇರದೊಳಾಗದು. ಈನೆರೆಯವರನಿಬರ ಮಿವನನೊಳಪುಗಲುಮಿದಿರ್ಚಲುಮಾಱದೆ ಬಱಿಬೇರದಿಂ ಕಳ್ಳರೆಟ್ಟಿಱಿಕೆಯುಳ್ಳರಂ, ಕಣ್ಬೇನೆಯವರ್ಬೆಳಕಂ, ಗೂಗೆಗಳ್ಪಗಲಂ, ನಾಸ್ತಿಕರ್ ವೇದಶಾಸ್ತ್ರಂಗಳಂ, ಗಾಂಪರೊಳ್ಗಬ್ಬಮನೆಗ್ಗರಕ್ಕರಿಗರಂ ಪಗೆಸಾರಿ ಪಂಬಲಿಸಿ ಬಸವೞಿವಂತೆ ಪಲತೆಱದಿಂ ಬನ್ನಂಬಡುವರ್. ಇವರ್ಗಮಾರಾಜನೃಪಂಗಂ ತಾರತಮ್ಯಂ ಆಡುಗಳ್ಗಮಾನೆಗಮೊಳ್ಳೆಗಳ್ಗಮುರಗೇಂದ್ರಂಗಂ, ನಾಯಸಂಗಳ್ಗಂ ವೈನತೇಯಂಗಂ, ಕಿಱುಬಂಗಳ್ಗಂ ಕೇಸರಿಗಂ, ಮಿಂಚುಂಬುೞುಗಳ್ಗಂ ಮಿಹಿರಂಗಂ, ಗುಂಬಗುೞಿಗಳ್ಗಂ ಅಂಬುಧಿಗಂ, ಅಣುಗಳ್ಗಂ ಅಮರಗಿರಿಗಂ, ಮಿಕ್ಕೋದುಗಳ್ಗಂ ವೇದಕ್ಕಂ, ಅಖಿಲದೇವರ್ಗಮಬ್ಜನಾಭಂಗಂ ಇರ್ಪಂತಿರ್ಕುಂ. ಅದಱಿಂದಾಮಿವರ ನೇಹಮಂ ನೀಳ್ಕರಿಸಿಯವನನಿದಿರ್ಗೊಂಡುಪಚರಿಸಿಯೆರವಿಲ್ಲದೆ ಬೆರಸಿ ಬೇಳ್ಪ ಕಜ್ಜ

ಮಂ ಸಾಧಿಸಿಕೊಂಬುದೇ ಜಾಣ್ಮೆಯೆಂದು—ನಿಶ್ಚಯಿಸಿ, ಪೊೞಲಿಂ ಪೊಱಮಟ್ಟು ತೆಂಕಣ ಪೊೞೆಯಂ ದಾಂಟಿ ಪಡುವಣ್ಗೆ ಪರಿವ ಕಿಱುಪೊೞೆಯ ತಡಿವರೆಗಮೆಯ್ದಿ, ಅಲ್ಲಿರ್ವರುಂ ದಂಡಿಗೆಗಳನಿೞಿದು ಬೞಿಕಂ ಕ್ಷೇಮಾಲಿಂಗನಂಗೆಯ್ದು, ಉಡುಗೊಱೆಗಳಂ ಕೊಟ್ಟು ಕೊಂಡು, ಸರಿದಂಡಿಗೆಗಳೊಳ್ ಮಂಡಿಸಿ ಮಾತಾಡುತುಂ ಬರ್ಪಲ್ಲಿ ;

ರಾಜನೃಪಂ ತಿರುಮಲೆರಾಜನಂ ನೋಡಿ— " ರಾಯ ! ನೀಂ ಪಲವುಂ ದಿವಸಮೀದೇಶಮಂ ಪೊರ್ದದಿರ್ದುದಱಿಂ ಪಲಂಬರ್ ಪ್ರಭುಗಳ್ ಪಲತೆಱದೊಳ್ ಪರಿದಾಡುತೆ ಪದುಳದೊಳಿರ್ದರ್. ದೇವರೆಯ್ತಂದ ಬೞಿಕೀತಕ್ಕುಮಿಕ್ಕುರ ಸೊರ್ಕು ಸುರ್ಕಿ ಪೊಡವಿ ಕಿಱುದುಂ ದಿವಸದೊಳೇಕರಾಜ್ಯಮಪ್ಪುದು. " ಎಂಬುದುಂ ; ಅವಂ—" ರಾಜರಸ ! ಕೇಳ್ವುದು. ಆಮೆಲ್ಲಿರ್ದೊಡಮೇಂ ? ಎಮ್ಮಿಂದಪ್ಪ ಕಜ್ಜಮಾವುದು ? ಈನಾಡುಬೀಡುಗಳನಿತುಂ ನಿಮ್ಮವು. ಆಂ ನೀಮಿತ್ತ ಪಡಿಯೊಳಿರ್ಪೆವು. ಎಮ್ಮಂ ಬೆಸಗೊಳವೇೞ್ಕುಮೆಂದುಂ ಮನದಿರವನಾರಯ್ಯವೇೞ್ಕುಮೆಂದುಂ ಬೞಿಸಲವೇೞ್ಕುಮೆಂದುಂ ಆಳೋಚಿಸದೀದೊರೆತನಮೆ ಸ್ವಕೀಯಮೆಂದು ಬಗೆದು ನಡೆಯಿಸವೇೞ್ಕುಂ " ಎನಲೊಡಂ ; ರಾಜನೃಪಂ ದೇವರಾಜರಸನಂ ಸನ್ನೆಗೆಯ್ದು ರಾಯನೊಡನೆ— " ನಿಮ್ಮೆಮ್ಮೊಳಿಂತೆಣಿಸಿದ ಪಿರಂತೆ ನಡೆವುದರ್ಕೆ ಸಂದೆಯಮಿಲ್ಲ. ಶ್ರೀರಂಗೇಶನೇ ನೆರವಪ್ಪಂ. " ಎಂದೀತೆಱದಿಷ್ಟಾಲಾಪಂಗಳಿಂದಮೆ ಕಳೆದ ಪೊೞ್ತಿಂ ನಡೆದ ದಾರಿಯನಱಿಯದೆ ಪಟ್ಟಣದೊಳ್ ಮುನ್ನಮೆ ರಾಜನೃಪಂಗೆಂದು ಸಜ್ಜುಗೆಯ್ದ ಬೀಡಾರದ ಸರಿಸಕ್ಕೆ ಸಾರ್ತರ್ಪುದುಂ; ಪಡಿಯಱಂ— " ಜೀಯ ! ಪರಾಕು ! " ಎಂದೆಚ್ಚಱಿಸಿದಂ.

ಆಗಳಲ್ಲಿ ದಂಡಿಗೆಯಂ ನಿಲ್ಲಿಸಿ ತಿರುಮಲೆರಾಜಂ ತನ್ನ ದಂಡನಾಯಕನನೆಕ್ಕಟಿ ಕರೆದು— " ಈರಾಜನೃಪನೆಮ್ಮ ಪುಣ್ಯೋದಯದಿಂದೆಮ್ಮವನಾದಂ. ಈತನ ಕೆಳೆಯೆಮಗೆ ಮಂತ್ರಸಿದ್ಧಿಯಂತೆಯುಮಪ್ಪ

ಶಕ್ತಿಯಂತೆಯುಂ ಯೋಗಸಿದ್ಧಿಯಂತೆಯುಂ ದೇವತಾಪ್ರಸಾದದಂತೆಯು ಮತ್ಯಂತಾತಿಶಯಾವಹಮಾಗಿರ್ಕುಂ, ಆದಱಿಂದೀತಂಗೆ ಸಂತಸಮಪ್ಪ ವೊಲುಲುಪೆಯುಪಚಾರಂಗಳಿಂ ಮನಂಗೊಳಿಪುದು " ಎಂದಾಣತಿ ಯಿತ್ತು, ರಾಜನೃಪನ ಮೊಗಮಂ ನೋಡಿ ವಿನಯಂಗೂಡಿ—" ಬೀಡಾರ ದೊಳ್ ವಿಶ್ರಮಿಪುದು " ಎಂದು ಬೀೞ್ಕೊಟ್ಟು, ತಾನುಂ ತನ್ನರಮನೆಯು ಮೊಗಮಪ್ಪುದುಂ ;

ರಾಜನೃಪನ ಕೈವಾರಿಗಳ್ ಕೆಯ್ಯೆತ್ತಿ—ಸ್ವಸ್ತಿ ! ಸಮಸ್ತ ಸಾಮಂತಮಹೀಪಾಲಮೌಳಿಮಾಲಾಲಾಲಿತಪದರಾಜೀವ ! ರಾಜೀವಸಖ ಗರ್ವಸರ್ವಸ್ವನಿರ್ವಾಪಣಚಣಪ್ರತಾಪೋದಯ ! ದಯಾರಸತರಂಗಾಯಿ ತಾಪಾಂಗಾವಲೋಕನಾಪ್ಯಾಯಿತ ಕರ್ಣಾಟಮಂಡಲ ! ಮಂಡಲಾಗ್ರ ಖಂಡಿತಾರಾತಿನೃಪಕಂಠಕಾಂಡೋಚ್ಚಲದ್ರಕ್ತ ಧಾರಾಪರಿಮೃಷ್ಟತದೀಯ ಬಿರುದ ! ಬಿರುದಂತೆಂಬರಗಂಡ ! ರಾಜನೃಪ ! ವಿಜಯೀಭವ ! ದಿಗ್ವಿ ಜಯೀಭವ ! ಎಂದು ಪೊಗೞ್ವುದುಂ ;

ಆದಂ ಕೇಳ್ದು ಮುಂಗಾರ ಮೊೞಗಂ ಕೇಳ್ದ ಕೇಸರಿಯಂತೆ ಕನಲ್ದು, ಕಾಲೋಚಿತಮಲ್ತೆಂದಾಕನಲ್ಕೆಯನೊಳಕೊಂಡು ತನ್ನ ಕೆಲ ದೊಳ್ ಬರ್ಪ ಮಂತ್ರಿಯೊರ್ವನಂ ಕರೆದು—" ನೀಂ ರಾಜನೃಪನ ಬೞಿ ಗೆಯ್ದಿ ಆತನ ಮನಂ ಕದಡದಂತನುವೇೞ್ದು ಅಂತೆಂಬರಗಂಡನೆಂಬು ದೊಂದು ಬಿರುದನೆಮ್ಮಿದಿರೊಳ್ ಪೊಗೞದಂತೆ ಗೆಯ್ವುದು " ಎಂದು ಕಳುಪುವಿನಂ ;

ಅವನಲ್ಲಿಗೆಯ್ದಿ ಕೆಯ್ಮುಗಿದು—" ದೇವರೆಡೆಯೊಳೆಮ್ಮಾಳ್ದರ ನೇಹ ಮೆರವಿಲ್ಲದಿರ್ಕುಂ. ಇದಂ ಸೈರಿಸಲಾಱದಿದಱಾಳೂಣೆಯಮನೂಹಿಸಿ ಯೆಳ್ಳನಿತುಮುಂಟಾಡೊಡದಂ ನೆಗೞಿಸಿ ಪೆಱಿಯೊಳ್ ಕಱಿಗಂಡಂತೆ ಕೊಂಡು ಕೊನರಿಸಲೆಂದು ಕಾದಿರ್ಪರ್. ಅದರ್ಕೀಗಳಂತೆಂಬರಗಂಡ ನೆಂಬೀಬಿರುದು ದೇವರ ವಂಶಪರಂಪರೆಯೊಳಮೆಮ್ಮಾಳ್ದರ ಪರಂಪರೆಯೊಳ

ಮೊಳದು. ಆದನಿರ್ವರುಮಿರ್ಪೆಡೆಯೊಳುಗ್ಗಡಿಸದಂತೆ ಕೈವಾರಿಗಳ್ಗೆ ಕಟ್ಟಳೆಯಾಯ್ತು. ದೇವರ ಬಗೆಯನವರ್ಗಮಂತು ನಿರವಿಸವೇೞ್ಕುಂ '' ಎಂದು ಬಿನ್ನವಿಪುದುಂ ;

ರಾಜನೃಪನೊಡವುಟ್ಟಿದನ ಮೊಗಮಂ ನಿಟ್ಟಿಸೆಯಾದೇವರಾಜಂ ನಸುಕಿನಿಸುವೆರಸು ಮೋಡಿಯೊಳ್ ನಿಯೋಗಿಯ ಮೊಗಮಂ ನೋಡಿ— '' ನೀಂ ಬಿನ್ನವಿಸಿದುದು ಸಾಜಂ. ಅಂತಾದೊಡಮೀಬಿರುದು ನಿಮ್ಮರಸರ್ಗೆ ಕೈವಾರಿಗಳಿಂ ಬಂದುದಾದುದಱಿಂ ಪೊಗೞವೇಡೆಂದು ನಿರವಿಸಿದೊಡಮವರಂತೆ ಮಾಣ್ದಿರ್ಪರ್. ಎಮಗೀಬಿರುದೆಮ್ಮ ಪಿರಿಯರ ಬೀರದಿಂ ಸಮನಿಸಿ ಸೈನಿಕರುರ್ಕಿನಿಂ ನೆಗೞ್ದುದು. ಆದುದಱಿಂ ಕೈವಾರಿಗಳಂ ತಡೆಯಲ್ಕೆ ಕಾರಣಮಿಲ್ಲ. ಮುನ್ನೆಮ್ಮ ಮುತ್ತಯ್ಯನೆನಿಸಿದ ಬೆಟ್ಟದ ಚಾಮರಾಜಭೂಪಾಲನ ಮನ್ನಣೆಯ ತುೞಿಲಾಳ್ ಕೞಲೆಯ ನಂಜಸೆಟ್ಟಿ ನಂಜನಗೂಡ ಜಾತ್ರೆಯೊಳ್ ನೆರೆದ ಪಲಂಬರ್ ಪ್ರಭುಗಳ ಮುಂದುಗ್ಗಡಿಪ ಪಲವುಂ ಬಿರುದುಗಳಂ ಕೇಳ್ದು ಸೈರಿಸದೆ ಪಲವುಂ ಪಜ್ಜೆಗಳನಡಕಂಗೆಯ್ವಾನೆವಜ್ಜೆಯಂತೆಯುಂ, ಪಲವುಂ ಪೊೞೆಗಳನೊಳಕೊಳ್ವ ಮುನ್ನೀರಂತೆಯುಂ, ಪಲವುಂ ಮಹಾಭೂತಂಗಳನಾವರಿಪಾಗಸದಂತೆಯುಂ, ಪಲವುಂ ಬಿರುದುಗಳಂ ನೀೞ್ಕುರಿಸಿ ನೆಗೞ್ವ ಅಂತೆಂಬರಗಂಡನೆಂಬ ಬಿರುದಂ ತಾಂ ಬಲಗೆಯ್ಯೊಳ್ ಪಿಡಿದ ಕಟಾರದಿಂದೆಡಗೆಯ್ಯೊಳಂಗಡಿಯ ಮಾನಮಂ ಪಿಡಿದು ಬಾಜಿಸಿಯುಗ್ಗಡಿಪುದುಮಲ್ಲಿ ನೆರೆದ ಸಮಸ್ತಪ್ರಭುಗಳುಮೊಟ್ಟಾಗಿ ತಂತಮ್ಮ ದೞದೊಡನವನಂ ಪೊಯ್ಯಲೆಂದು ಸುತ್ತು ಮುತ್ತುವಿನಮವಂ ಗಿಡುಗಂ ಗಿಳಿಗಳಂ, ಕಿಱುಬಂ ಕುಱಿಗಳಂ, ಪುಲಿ ಮೊಲಂಗಳಂ, ಜಕ್ಕಂದೊಳಲಿ ಪಲ್ವಲಮಂ, ಮದಕರಿ ಕದಳೀವನಮಂ ಪುಗುವಂತೆ ಪೊಕ್ಕು ಮಿಕ್ಕೊಕ್ಕಲಿಕ್ಕಿ ಗೆಲ್ದು ಬಿರುದನುಗ್ಗಡಿಸಿದಂ. ಆದಱಿಂದೀ ಬಿರುದೆಮ್ಮ ತುೞಿಲಾಳ್ಗಳ ಪಾಲ್ಗೆವಂದಿರ್ಪುದು. ಆದಱಿನೀವಿಷಯದೊಳಾರುಮಂ ಗಣಿಸರ್. ಆಮೆ ನಿರವಿಸಿದೊಡಂ ಸಲಿಗೆಯಿಂದಾಳೊಡೆ

ತನದ ಮೇರೆಯುಂ ಮೀಱುವರ್. ಇದರ್ಕೀತೊಡರ್. ನಿಮ್ಮ ಬಗೆವಂ ದಂತು !'' ಎಂದು ನುಡಿದು ವೀಳೆಯಂಗೊಟ್ಟು ಕಳುಪುವುದುಂ ;

ಅವಂ ತನ್ನಾಳ್ದನ ಬೞಿಯಂ ಸಾರ್ದು ತಾಂ ಕೇಳ್ದುದನೆಲ್ಲಮಂ ಬಿನ್ನವಿಸೆಯಾರಾಯಂ ಮನದೊಳ್ ಬಿರುದಿಂಗೆ ಬೀಯಮಪ್ಪೆಡೆಯೊಳ್ ಸೈರಿಪುದು ಬೀರರ್ಗೆ ಪಿರಿಯೂಣೆಯಮೆಂದು ಬಗೆದು,—ಅಕಟಾ ! ಆಮಿವರೊಳ್ಬೆರಸಿದುದು ಕೂಗಿ ಮಾರಿಯುಂ ಕರೆತಂದವೊಲಾದುದು ; ಆದೊಡಮಿನ್ನಿವರೊಳ್ ಬಾಸೆನಂಬುಗೆಗಳನಿತ್ತೆವು—ಎಂದು ಬಗೆದು ಪಿಂದೆ ಗೆಯುದೆ ಕೈಸೆಱೆಗೊಂಡು ಕಡೆಗಾಣಿಸುವುದೇ ಕಜ್ಜಮೆಂದಾಳೋಚಿಸಿ— ''ಮಱುವಗಲೊಳ್ ಪೊತ್ತುಱೆಯಾಂ ವೈಹಾಳಿಯ ಬಯಲೊಳಿನಿಸುಂ ಪೊೞ್ತು ಬಿನದದೊಳಿರ್ದು ಬರ್ಪೆವು ಇಲ್ಲಿ ನೀಮುಂ ರಂಗೇಶನ ಸನ್ನಿಧಿ ಗೆಯ್ದು ಸಂದರ್ಶನಂಗೆಯ್ದು ವಂದಿಪುದು.'' ಎಂದು ರಾಜನೃಪಂಗೆ ಬೆಸಸಿ ಕಳುಪಿ, ಪೊೞಲ ಪೊಱವಳಯದ ಸಾರಿಯ ಮಂಟಪದೊಳ್ ಕುಳ್ಳಿರ್ದು ಮೊದಲ ದಿವಸದೊಳ್ ಮುನಿದು ಮೋಡಿಯೊಳಿರ್ಪ ಸಕಲ ಪ್ರಭುಗಳಂ ಕರೆಯಿಸಿಯುವರೇೞ್ತರ್ಪನ್ನಂ ತನ್ನ ಭಟರೆಸಗುವ ಲಗ್ಗೆ ಸೆಂಡಾಟಮಂ ನಿಟ್ಟಿಪ ನೆವದಿಂದಿರ್ದು ಅನಿಬರುಂ ಬರ್ಪುದುಮವರನೆಕ್ಕಟಿ ಗರೆದು—''ನಿನ್ನೆ ನಿಮ್ಮೆಲ್ಲರ್ಗಂ ಪೇೞ್ದೊಡೆ ಮನ್ತ್ರಭೇದಮಪ್ಪುದೆಂದು ಮೈಸೂರವನೊಳ್ ಪುಸಿನೇಹಮಂ ಪೊಸೆಯಿಸಿ ಪೊೞಲಂ ಪುಗಿಸಿದೆವು. ಅವನಂ ಕೈಸೆಱೆಗೊಳಲ್ಕಿದೇ ವೇಳೆ. ಗಳಿಲನೆ ತೆರಳಲ್ವೇೞ್ಕುಂ'' ಎಂಬುದು ಮವರವರತಿತ್ವರಿತದಿಂ ತಂತಮ್ಮ ದೞಮಂ ಮೇಳವಿಸುತಿರ್ಪಿನಂ ;

ಇತ್ತಲೀರಾಜನೃಪನರುಣೋದಯದೊಳುಪ್ಪವಡಿಸುತುಂ ಶ್ರೀಮ ನ್ನಾರಾಯಣನ ಪರ ವಿಭವ ವ್ಯೂಹಾದಿ ಮೂರ್ತಿಗಳುಮಂ ಗಜೇಂದ್ರ ಮೋಕ್ಷಣಾದಿದಿವ್ಯಚಾರಿತ್ರಂಗಳುಮಂ ನೆನೆದು ನಾಮಸಂಕೀರ್ತನಂ ಗೆಯ್ದು ಕಾವೇರಿಗೆಯ್ದಿ ಮಿಂದು ಮಡಿಯುಟ್ಟು ಲಲಾಟಾದಿತತ್ತದು ಚಿತಸ್ಥಾನಂಗಳೊಳ್ ದ್ವಾದಶೋರ್ಧ್ವಪುಂಡ್ರಂಗಳನಿಟ್ಟು ತುಳಸಿ ತಾವರೆ

ಮಣಿಗಳವುಳ್ಸರವುಂ ಧರಿಸಿಯುರಮನೆಗೆ ವಂದಲ್ಲಿ ಗೃಹಾರ್ಚಾರೂಪ ದೊಳೆಸೆವಚ್ಯುತನಂ ಷೋಡಶೋಪಚಾರಂಗಳಿಂದರ್ಚಿಸಿ ತೀರ್ಥಪ್ರಸಾದಂ ಗೊಂಡು ನಿತ್ಯದಾನಮನೆಸಗಿ ಬೞಿಕೊಳ್ದೊಡವುಗಳಿಂದೊಡಲಂ ಸಿಂಗ ರಿಸಿ ಮಿತಪರಿಜನಂಬೆರಸು ರಂಗೇಶನ ದೇಗುಲಮಂ ಸಾರ್ದು ಗೋಪುರದ ಬಾಗಿಲನೊಳವೊಕ್ಕು ಬಲವರ್ಪಾಗಳ್ ;

ಅಲ್ಲಿರ್ಪ ಶ್ರೀವೈಷ್ಣವರತಿಹರ್ಷದಿನಿದಿರ್ವಂದಾಶೀರ್ವಾದಿಸಿ—'' ಎಲೆ ಮಾರಾಯ ! ನೀವೆಮ್ಮೀಸ್ವಾಮಿಗೀದಿವ್ಯಪ್ರಕಾರಮಂ ಕಟ್ಟಿಸಿದು ದರ್ಕೆ ಸಂತಸಂಬಟ್ಟು ನಿಮಗೀಪರಿಯ ಪಲವುಂ ಕೋಂಟೆಗಳನಿತ್ತು ದಯೆಗೆಯ್ವರ್ '' ಎಂಬುದುಂ ; ಅವರ್ಗೆ ವಂದಿಸಿ,—ಅಖಿಲಜಗತ್ಕಾರ ಣನುಮಪ್ರಮೇಯನುಮನವಧಿಕಾತಿಶಯಾಸಂಖ್ಯೇಯಕಲ್ಯಾಣಗುಣಗಣ ನುಮಪ್ಪ ನಾರಾಯಣಂಗಾಳ್ಗೆಯ್ದೊಲಿಪುದರ್ಕಾನೆನಿತಜವಂ. ನಿಮ್ಮೊ ಲವುಂ ಪರಕೆಗಳುಮೆಮಗೆ ಪರಮಪ್ರಾಪ್ಯಂ—ಎಂದು ನುಡಿಯುತ್ತವರೊ ಡವೆರಸಲ್ಲಿಂದೊಳಪೊಕ್ಕು ಬಲಿಪೀಠ ಧ್ವಜಸ್ತಂಭಂಗಳ ಬೞಿಯೊಳ್ ಸ್ವಾ ಮಿಗೆ ಸಾಷ್ಟಾಂಗವೆಱಗಿಯಾದ್ವಿತೀಯಾವರಣದೊಳ್ ಬಲವರುತ್ತೆ ದಕ್ಷಿ ಣಭಾಗದೊಳೆಸೆವ ಪರಕಾಲಾದಿದಿವ್ಯಸೂರಿಗಳಂ, ಪರಾಂಕುಶರಂ, ವಿ ಷ್ಣುಚಿತ್ತರಂ, ಶೂಡಿಕ್ಕುಡುತ್ತನಾಚ್ಚಿಯಾರಂ, ಪಾರ್ಥಸಾರಥಿಯಂ, ನೃಸಿಂಹಸ್ವಾಮಿಯಂ ಪರಿವಿಡಿಯಿಂ ಬಲಗೊಂಡು, ಪಶ್ಚಿಮೋತ್ತರಭಾಗ ಮಂ ಸಾರ್ದು ಅಲ್ಲಿ ಸಕಲಜಗಜ್ಜನನಿಯೆನಿಸಿದ ಶ್ರೀರಂಗನಾಚ್ಚಿಯಾ ರಮ್ಮನವರ ದಿವ್ಯಶ್ರೀಪಾದಪದ್ಮಪರಾಗಮಂ ಸಿರದೊಳಾಂತು, ಕಟಾಕ್ಷಾ ಮೃತರಸಾಸೇಕದಿಂ ತಣಿದು, ಮುಂತಣ್ಗೆ ನಡೆದು, ವೇಣುಗೋಪಾಲ ವರದರಾಜ ರಾಮಾನುಜ ಶ್ರೀವತ್ಸಾಂಕರಂ ಸೇವಿಸಿ, ಜಯವಿಜಯರ್ಗೆ ಕೆಯ್ಮುಗಿದು ಒಳವೊಕ್ಕು ವಿಷ್ವಕ್ಸೇನರಂ ವಂದಿಸಿ, ಮುಂತಣ್ಗೆ ನಡೆದು, ಗರ್ಭಗೃಹದ ಬಾಗಿಲೊಳ್ ಕೆಯ್ಮುಗಿದು ನಿಂದು ನಿಟ್ಟಿಸುವಿನಂ—

—ಶ್ರೀರಂಗಪಟ್ಟಣದ ರಂಗನಾಥಸ್ವಾಮಿಯ ವರ್ಣನೆ—

ಇಂಗಡಲ ನಟ್ಟನಡುವೆ ನೆಗೆದು ಮೆಯ್ದೋಱುವ ಕರ್ಮಣಿದೀವಿಯಂತೆಯುಂ ಐಕಿಲ್ವೆಟ್ಟಿನ ತಪ್ಪಲೊಳ್ ಬೆಳೆದ ಕರ್ದಾಳೆಯ ಬನದಂತೆಯುಂ ಬಾಂಬೊಟ್ಟೆಯ ಮಡುವಿನೆಡೆಯೊಳ್ ಪೂತು ಪೊದಱಿಟ್ಟ ಕನೆ೯ಯ್ದಿಲ ಗಡಣದಂತೆಯುಂ ಮೆಯ್ಸಿರಿವೆತ್ತು ಶೇಷತಲ್ಪದೊಳ್ ಪವಡಿಸಿ--ಎಳವಿಸಿಲ ಸೋಂಕಿನಿಂದೆಸೆವಾಗಸದಂತೆಯುಮರಿದಳದ ಪಾಸಱೆಯಿಂದೊಪ್ಪುವ ಕಾಡಿಗೆವೆಟ್ಟನಂತೆಯುಂ ಮಿಂಚಿನ ಮಿಱುಗಿನಿಂ ಮೆಱೆವ ಕಾರ್ಮುಗಿಲಂತೆಯುಂ ಪಾವುಗಳ ಬೇರದಿಂ ಪಾತಾಳಮಂ ಪುಗಲ್ವೈಱುಗಿದ ಗರುಡನೆಱಂಕೆಗಳ ಕಳೆಯೊಳ್ತೊಳಪ ಕಡಲಂತೆಯುಂ ಉಟ್ಟ ಪೊಂಬಟ್ಟೆಯ ಪೊಗರಿಂ ಬಗೆಗೊಳ್ವ ಸಿರಿಮೆಯ್ಯ ಕರ್ವೆಳಗು-ಎಡೆವಿಡದೆ ನಿಟ್ಟಿಪ ಪಾಲ್ಗಡಲ ಕುವರಿಯ ಕಱಯಾಲೆಯ ಕದಿರ್ಗಳಿಂ ಬಳೆದು, ಸುಱಿವೊರ್ಕುಟಿ ತಾವರೆಯಲರುಣಿಗಳ ಬಳಗದ ನೆರವಿನಿಂ ನಿಮಿರ್ದು, ಸಿರಿದೊಳಸಿಯ ದುಂಡದಂಡೆಯಂದುಗೆಯೊಳ್ ಪೆರ್ಮೆವೆತ್ತು, ಅಡಿಯುಂಗುಟದ ಸೋಂಕಿನೊಳ್ ನೆಗಟ್ದ ಬಾಂಬೊಟ್ಟೆಯೊಳ್ ಕೇಣದಿಂ ಮೆಯ್ಯೊಲ್ಲಮಂ ಸುತ್ತಿಸುಱಿವ ಜಗುನೆಯ ತೆಱೆಯ ತಿಂತಿಣಿಯಂತೆ ಕವಿದುವರೆ: ಅದನಿದಿರಿಸುತ್ತೆ ಪತ್ತೆಸಾರ್ದು ಮುನ್ನಾಗಸಮುನಳೆವಾಗಳಲರಿಚಂ ತೊಳೆದಿಟ್ಟ ಕುಂಕುಮದಣ್ಪಿನಿಂದಮೋ ಮೋಣೆಡೆವಿಡದೆ ಪೊಡೆಮಡುವ ಪುರಹರ ಪುರಂದರಾದ್ಯರ ಮೌಳಿಮಾಣಿಕ್ಯಪ್ರಭಾಜಾಲದಿಂದಮೋ ಮುತ್ತೊಯ್ಯನೊತ್ತುವ ಸಿರಿಪೊಡಮಿರಾಣಿಯುರ ಚೆಂಗೆಯ್ದಳದ ಕಳೆಯಿಂದಮೋ ಯೋಗಿಜನಮನೋನುರಾಗದಿಂದಮೋ ಎಂಬಂತೆ ಕೆಂಪು ಪೆಂಪುವೆತ್ತ ಮೆಲ್ಲಡಿಗಳಿಂ। ಸಾಜದ ಕರ್ಪು ನೇವುರದ ಪಚ್ಚೆ ವಣಿಯ ಪಸುರ್ಪು ಉಟ್ಟ ಪೀತಾಂಬರದ ಪೊಂಬೊಗರ್ಗಳಿಂ ಮೂವಣ್ಣಂಬಡೆದು ಗಂಡುಸೋಗೆಯ ದುಂಡುಗೊರಲಂತೆಸೆವ ಕಿಱುದೊಡೆಗಳಿಂ। ಕಾವನಾರವೆಯ ಕಬ್ಬಾಟೆಗಳಂತೆಯುಂ ಬಿನದಂಗಳೊಳ್ ನೆಮ್ಮುವ ಸಿರಿಪೊಡಮಿರಾಣಿಯುರ ಕರ್ಬ

ಟ್ಟಿಯ ಕೌಳುಡೆಗಳಂತೆಯುಂ ತೋರ್ಕೆವೆತ್ತ ತೋರದೊಡೆಗಳಿಂ। ಪೊಡೆ ಗಟ್ಟಿದ ಮುತ್ತಿನ ಸರದ ಬೆಳ್ವೆಳಗೆಂಬ ತಿಳಿನೀರಿಂ ತೀವಿ ತನ್ನೊಳ್ ಬೆಳೆದ ತಾವರೆಯರಲ್ವಡಿಯಿಂ ನಾಲ್ಕೊಗನಂ ಪಡೆದ ಸುಟುವೊರ್ಕುಟುಳ್ಗ ಳದಿಂ। ಎಡೆವಿಡದಿಡಿದ ಬಾವನ್ನದಣ್ಪಿನ ಮೆಲ್ಪಾಸುಂ ಕೌಸ್ತುಭಮಣಿ ದೀಪಮುಂ ತೊಳಚಿಸರದುಯ್ಯಲುಂ ಪೊದೆದ ಪೊಂಬಟ್ಟೆಯ ಮೇಲ್ಕಟ್ಟುಂ ಕಂಠಿಕಾಮುಕ್ತಾಹಾರದ ಲಂಬಣಂಗಳುಂ ಮೆಯ್ಯೊಳ್ ಸಿರಿಯರಸಿಯ ಸಜ್ಜೆವನೆಯಂತೆಸೆವ ಪೇರೆರ್ದೆಯಿಂ। ಪಾಸಿನ ಬೆಳ್ವಾವಿನ ಬಿಂಕಮಂ ಬಿಡಿ ಸಲೆಂದೆಡಬಲದೊಳ್ ತಲೆನಾಲಂಗಳೆ ಪಾಯ್ವ ಎಡೆಯ ಕರ್ಬಾವುಗಳಂತೆ ಮಣಿದು ಮಂಡೆಯೆಡೆಗಂ ನೀಳ್ದು ಮೊಟಕಾಲೆಡೆಗಂ ನಡೆದ ಬಲದೆಡದ ನಿಡುದೋಳ್ಗಳಿಂ। ಮಕರಕುಂಡಲಮಣಿಪ್ರಭಾಪರಿವೇಷಮಂಡಲಮಂ ಮುಗುಳ್ನಗೆವೆಳ್ದಿಂಗಳಿಂ ಮುಸುಂಕುವ ಮೊಗಚಂದಿರನಿಂ। ನುಣ್ಬಣೆಗನ್ನ ಡಿಯೊಳ್ ಪಡಿನೆಟಿಲ್ಗೊಂಡುದ್ದಂಡನಾಭೀಪುಂಡರೀಕ ತಕ್ಕರ್ಣಿಕೆಗಳಂತೆ ಕಣ್ಗೊಳಿಪೂರ್ಧ್ವಪುಂಡ್ರಶ್ರೀಚೂರ್ಣಂಗಳಿಂ। ಮೇಲ್ಗಡೆಯೊಳ್ ಕವಿದ ಪಾವ ಜಿಯನ ಪೆಡೆವಣಿವೊಗರ ಗಡಣಮೋ ಮೇಣಿದು ತಲೆವುಲಂಗಿನೊಳಿಟ್ಟ ಬಲಗೆಯ್ಯ ಸೆಳ್ಳುಗುರ್ಗಳ ಬೆಳಗಿನ ಬಿಂದಮೋ ಮೊಗದಾವರೆಯ ಮೋ ಡಿಗೆ ಮೋಹಿಸಿ ಮುದ್ದಿಸಲ್ಬವಿತಂದ ಗಗನಮಣಿಬಿಂಬಮೋ ಎಂಬ ಸಂದೆಯಮನೊದವಿಪ ದಿವ್ಯಕಿರೀಟದಿಂ। ಮನಂಗೊಳಿಪ ದಿವ್ಯಮಂಗಳ ವಿಗ್ರಹದ ಸಮುದಾಯಶೋಭೆಯುಂ ದಿಟ್ಟಿಸೇಜಿಕೆಗಳಿಂ ಮೊಗೆವೊಗೆ ದೀಂಟಿ ಸವಿಸವಿದುರ್ಕಿ, ಸೊರ್ಕು ತಲೆಗೇಜಿ, ಮೆಯ್ಮಜಿದು ಮಜವ ಟ್ಟೊಡಲೊಳೆಡೆವಿಡದಡಿಗಡಿಗುಣ್ಮುವ ನವಿರ್ಗಳುಂ ಪೊನಲಿಟ್ಟು ಪಾಯ್ದೊ ಡವಜಿಯದೆ ಪರಿವ ಸೊಗದಾಲಿನೀರ್ಗಳುಂ ಸೆಜಿಬಿಗಿಯೆ ಬೇಗದೊಳ್ ಪೊಜವೊಣ್ಮಲಾಜದೆ ತಡಬಡುವ ಗದುಗದಮುಮಾಗಿ ಪಿರಿದುಂ ಪೊಟ್ಟಾ ನಂದಸಾಗರದೊಳ್ ಮುಟುಂಗಿ ತೇಲುತ್ತೊಯ್ಯನಾಸುಖಂ ಮೆಯ್ಯಿಂದು ಣ್ಮಿ ಪೊಣ್ಮೆ ಕಣ್ದೆಜಿದೆಟ್ಟಿರ್ತು ತಜುಪಾಯಿಂದೊಂದವಯವದ ಸೌಂ

ದರ್ಯ್ಗವುಂ ಬೇಱಿವೇಱಿ ಭಾವಿಸಿ ಬಗೆಯೊಳ್ ಬಂದಿಗೊಳ್ವೆನೆಂದು ಸಂಕಿನ ಪಾಱುಂಬಳಿಯ ಬಾವ್ಮ್ರದ ಪಟಿಯಿಗೆಯ ತಾವರೆಯಂಕುಸದ ಬಜ್ಜರದ ಮೆಯ್ಸಿರಿವೆತ್ತ ನುಣ್ಗೆಱಿಗಳಿಂದೆಸೆವ ಕೆಂದಳಿರ್ದಳವುಂ। ನಂಬಿ ಸೇಱಿದರೆಳಸುವ ಫಲಂಗಳನೊದವಿಸಲೆಂದ್ಮೆಗೊಂಬುಗಳೊಳಂ ಪೂತೆಸೆವ ಬಾಂಬೊಟಿಲ್ಮರನಂ ದೊರೆಗೊಂಬ ಮೆಲ್ಲಡಿಗಳಂ। ಅಂದು ಪಾಂಡವರ ಪಾಳೆಯದಿಂ ಕುರುನಗರಿಗೆ ದೂದುನಡೆದ ಬಟಿಲ್ಕೆಗಳೆಯಲೆಂದು ಒಯ್ಯ್ಯನೊತ್ತುವ ಸಿರಿಪೊಡವಿಯರ ಮೆಲ್ಗೈಸೋಂಕಿಂಗೆ ನವಿರುಣ್ಮುವ ಕಿಱುದೊಡೆಗಳಂ। ಒಂದೇ ಅಡಿಯುಂಗುಟದುದಿಯ ಸೋಂಕಿನಿಂ ಬಿಂಕಂಬಡೆದ ಗಂಗೆಯ ಗಾಡಿಯಂ ಕಡೆಗಣ್ಬಲೆಂದಿರ್ವೆಯ್ವೆತ್ತೀರಡಿಗಳ್ಗಂ ಕವಿದು ಪಾಯ್ವ ಜಗುನೆಯ ಪೊನಲ್ಗಳಂತೊಪ್ಪುವ ದುಂಡುದೊಡೆಗಳಂ। ಪೊಡೆವೂಗಾವಿನ ನೆವದಿಂ ಕುಡಿವರಿದು ಕೊನರ್ತ್ತ ಪರ್ಬುವ ಜಗತೀಲತೆಯ ದಾಂಗುಡಿಯ ತಾಯ್ಗುಟಿಯೆನಿಪ್ಪ ಸುಟಿವೊರ್ಕುಟಿಂ। ಎಡೆವಿಡದೆಡೆಯಾಡುವ ಸಿರಿವಡದಿಯಡಿಯಲತಿಗೆಯಣ್ಪುವಡೆದು ಪೊನ್ನುಡೆಯ ಪೊದರ್ಗೆಯೊಳವುದರ್ಗ ಸಿರಿಮೆಯ್ವೊಗರ ಸೇಱುವೆಯಿಂ ಸಿಂಗರಂಬಡೆದ ಪಲವಣ್ಣದ ತುಳಸಿಯ ದಂಡೆಯ ಪರಿವೇಷದ ನಟ್ಟನಡುವೆ ನೆಗಟ್ದ ಕೆಂಬರಲ ನೇಸರ್ವಟ್ಟನಿಂ ಬಗೆಗೊಳ್ವಾಗಸವುಂ ಪೋಲ್ವ ಪೇರೆರ್ದೆಯಂ। ಎಲ್ಲಾಜಗವುಂ ಪೊತ್ತು ಪೊಱುವ ಸಿರಿಯರಸನ ಸಿರಿಮುಡಿಗೀದಿವ್ಯಕಿರೀಟವುಂ ಮಿಕ್ಕಿನಲರಿಚಂ ಮೊದಲಾದರ ಮುಡಿಗಳ್ಗೀಕೇಸಡಿದಾವರೆಗಳು ಮಳವಟ್ಟಪುರ್ವೆಂದು ಮುಟ್ಟಿ ತೋರ್ಪಂತೆ ಮುಡಿಯೆಡೆಗಮಡಿಯೆಡೆಗಂ ನಡೆದ ಬಲದೆಡದ ನಿಡುದೋಳ್ಗಳಂ। ಬಗೆಯೊಳೊಗೆದ ಚಂದಿರನ ಬೆಳ್ವೆಳಗು ಪೊಱಸೂಸುವಂತೆ ಕಡೆವಾಯ್ಗಳೊಳ್ ಮಿಸುಪ ಮುಗುಳ್ನಗೆಯಂ। ತನ್ಮೊಳ್ತುಮೆಣೆಗೊಂಡು ಕೇಣವುನುಟಿದು ಆವಗಂ ತೇಜಂಬಡೆದುಗ್ರಜಾಡ್ಯಂಗಳನೊದೆದು ಬಾಹ್ಯಾಭ್ಯಂತರತವುಂಗಳಂ ಪರಿಹರಿಸುತ್ತೆ ನೀಳ್ದು ಪೊಸಬಗೆವಡೆದ ಸಸಿನೇಸರ್ಗಣ್ಗಳಂ। ನುಣ್ಬಣೆವಲಗೆಯೊಳ್ತೊಳಪ ಮಿವು

ಲೋರ್ಧ್ವಪುಂಡ್ರದ ಬೆಳ್ಗದಿರನಿದಿರ್ಗಾಯಲಾಜದೆ ಕೊಂಕಿ ಕವಿದ ನೊಸಲ ಪಟ್ಟದ ಕರ್ವುಣಿವೆಳಗಿನ ಮೊಳೆಗಳಂತೆಸೆವ ಸುರ್ಕುಂಗುರುಳ್ಗಳಂ। ಪದಿನಾಲ್ಕುಂ ಜಗದ ರಾಯತನದ ಬೆಳ್ಗೊಡೆಯುಂ ಪೋಲ್ವ ಪಾವೆಱಯುನ ಪೆಡೆವಟ್ಟಿನ ನೆಟಿಲೊಳ್ನಿಗಟ್ಟಿ ರನ್ನದ ಮುಗುಡಮುಂ। ಕೂರ್ತು ನೋಡುತ್ತಿರ್ದೊಡಂ—ನವನಿಧಿಗಳನೊಂದೆ ಸೂಱಯೊಳ್ ಕಂಡ ಕಡುಬಡವನಂತೆಯುಂ ಸುಗ್ಗಿಯೊಳ್ ಪೂದೋಂಟಮಂ ಪೊಕ್ಕ ಪಱಮೆವಱಗಳಂತೆಯುಂ ಬಿರ್ದಿನೊಳಗಿಕ್ಕಿದ ಪಂಚಭಕ್ಷ್ಯಪರಮಾನ್ನಂಗಳ್ಗೆ ಪಾಯ್ವ ಪಾರ್ವರ ಬಗೆಗಳಂತೆಯುಂ ಬಿಡದೆ ಸುಱವ ಜಡಿವಱಯುಂ ಸಾರ್ದ ಚಾದಗೆಗಳಂತೆಯುಂ ಆವುದಂ ಪಿಡಿವೆನಾವುದಂ ಬಿಡುವೆನೆಂಬ ತವಕದೊಳವನ ದಿಟ್ಟಿಗಳ್ ಅಡಿಯ ಮೆಲ್ಪಂ ತೊಡೆಯ ಬಲ್ಪಂ ಉಡಿಯೊಳ್ಪಂ ಪೊಡೆಯ ತೆಳ್ಪಂ ಉರದ ಪೆಂಪಂ ಒಡಲ ಸೊಂಪಂ ಮೊಗದ ಕಳೆಯುಂ ನಗೆಯ ಮೊಳೆಯುಂ ನೋಟದಿಂಪಂ ನೊಸಲ ನುಣ್ಪಂ ಆರಯ್ಯುತಡಿದೊಡಗಿ ಮುಡಿವರೆಗಂ ನಡೆದು ಮಗುಱ ತತ್ತದರ್ಥನಿಧಿಧ್ಯಾಸನದಿಂ ಮುಡಿದೊಡವಿನೊಳ್ ನೀಳ್ದು ಪಣೆವಟ್ಟದೊಳ್ ಕವಿದು ಕರುಳ್ಗಳೊಳ್ ಸುಱದು ನೊಸಲೊಳ್ ಮಿಸುಗಿ ಪುರ್ಬುಗಳೊಳ್ ಕೊಂಕಿ ಕಡೆಗಣ್ಗಳೊಳ್ ಕೂರ್ಪುವೆತ್ತು ದಿಟ್ಟಿಗಳೊಳ್ ತಣ್ಪಾಂತು ಮೂಗಿನೊಳರೆಮುಗುಳ್ತು ಗಲ್ಲದೊಳ್ ತೊಳಗಿ ಕಿವಿವಚ್ಚದೊಳ್ ಬೆಳಗಿ ಬಾಯ್ದೆಱಯೊಳ್ ಕೆಂಪಡರ್ದು ನಗೆಯೊಳ್ ಮೊಳೆತು ಕೊರಲೊಳ್ ಗೆಱಗೊಂಡು ಕನ್ಡದೊಳ್ ಬಳೆದು ತೋಳೊಳ್ ಕುಡಿವರಿದು ಎರ್ದೆಯೊಳ್ ಪಸರಿಸಿ ಸಿರಿಯೊಳ್ ಸಿಂಗರಂಬಡೆದು ಪೊಡೆವೂವಿನೊಳರಲ್ದು ಪೊರ್ಕುಳಿಯೊಳ್ ಸುಱದು ಪೊಡೆಯೊಳ್ ತೆಳ್ಪುವೆತ್ತು ನಡುವಿನೊಳ್ ನಮೆದು ತೊಡೆಯೊಳ್ ತೋರಮಾಗಿಯುಡೆಯೊಳೊಳ್ಪುವಡೆದು ಕಿಱುದೊಡೆಯೊಳ್ ಬಟ್ಟಿತ್ತಾಗಿ ಅಡಿಯೊಳ್ ಮೆಲ್ಪಂ ತಳೆದು ತತ್ತದಾತ್ಮಕಮಾಗೆ ಬಗೆಯೊಳ್ ಪತ್ತಿದ ಭಕ್ತಿರಸಪರಿಪಾಕಾತಿರೇಕದಿಂ ಸೊದೆಯುಂಡಂತೆಯುಂ ಸೊರ್ಕೇಱದಂತೆಯುಂ ಮುಱವಟ್ಟಂತೆಯುಂ ಮುಜಿ

ದೊಱಗಿದಂತೆಯುಂ ಬೆಱಗುವಡೆದಂತೆಯುಂ ಬೆಗಡುಗೊಂಡಂತೆಯುಂ ಕೆಲವುಂ ಪೊಟ್ತು ದಿವ್ಯಮಂಗಳವಿಗ್ರಹಗುಣಂಗಳಂ ಗಣನೆಗೆಯ್ದು ಮತ್ತೆ ದಿವ್ಯಾತ್ಮಕಗುಣಂಗಳಂ ಅಂತರಂಗದೊಳೆಣಿಸುತ್ತಿರ್ಪಿನಂ; ಅವುವೊಳಗಡಂಗದೆ ಪೊಱಪೊಣ್ಮಿ ಕೋಡಿಯನೋಡಿಸುವಂತೆ ನುತಿಗೆಯ್ದನದೆಂತೆನೆ :—

ಶ್ರೀವರ ! ಸಕಲಜಗಜ್ಜ ।
ನ್ಮಾವನಲಯಲೀಲ ! ರಂಗಮಂಗಳನಿಲಯಾ ! ॥
ಪಾವನಗುಣನಿಧಿ ! ಭಕ್ತನ ।
ಭಾವನೆಯೊಳ್ ಬಂದು ನಿಂದು ನಲಿ ನೀಂ ನಲವಿಂ ॥ ೧ ॥

ಓದುಗಳೊಳ್ ವೇದಂ ಪಿರಿ ।
ದಾದೊಡೆ ನೀಂ ರಂಗಧಾಮ ! ಸಕಲಜಗಜ್ಜ ॥
ನ್ಮಾದಿನಿಮಿತ್ತಾಭಿನ್ನೋ ।
ಪಾದಾನಂ ನನ್ನಿ ನಿನ್ನ ಗುಣವಿಭವಂಗಳ್ ॥ ೨ ॥

ಕಡುನೇಹದೆ ಮೂಜಗಮಂ ।
ಪೊಡೆಯೆಡೆಯೊಳ್ ಪೊತ್ತು ಪೊರೆವ ಪೊಸಬಗೆಯೆಱೆಯಾ ॥
ತಡೆದೆಮ್ಮನೇಕುಪೇಕ್ಷಿಪೆ ।
ಕುಡು ಕೂರ್ಪರ ಕೂರ್ಪ ! ನಿನ್ನ ಚೆನ್ನಡಿಯೊಲವಂ ॥೩॥

ನಿಟ್ಟಿಸದಿರೆ ನೀಂ ದಯೆಯಿಂ ।
ಪುಟ್ಟಿದು ಜಗಮೆಂತುಟೇೞ್ಗೆವೆತ್ತಪುದದಱಿಂ ॥
ಕಟ್ಟೆಱಕದಿಂದಮೆಮ್ಮಂ ।
ದಿಟ್ಟಿಸಿ ಕಾಪಿಟ್ಟು ಮೆಱೆವುದೊಡೆತನದದಟಂ ॥೪॥

ಪಶ್ಚಿಮ ರಂಗನಿವಾಸ ! ವಿ ।
ಪಶ್ಚಿನ್ನುತ ವಿಮಲ [ ವಿಷ್ಣು ] ಪರಮಾತ್ಮಾ ! ಸ ॥
ರ್ವಾಶ್ಚರ್ಯನಿಲಯ ! ನಿಗಮದ ।
ನಿಶ್ಚಯಮಂ ಬಗೆಯೆ ನಿನ್ನ ಚರಣಮೆ ಶರಣಂ ॥೫॥

ಎಂದು ನುತಿಸಿಯಾಗಳರ್ಚಕರ್ ತಂದಿತ್ತ ಗಂಧಮಾಲೆಗಳಂ ಧರಿಸಿ ಮುಡಿಯೊಳಿಟ್ಟು ಶಠಗೋಪಮೆಸರ ರನ್ನನಾವುಗೆಯುಂ ಭಕ್ತಿಯೊಳಾಂತು ತೀರ್ಥಪ್ರಸಾದಂಗಳನಂಗೀಕರಿಸಿ ಕೃತಾರ್ಥತೆವಡೆದು ಪೊಡೆಮಟ್ಟು ಅಲ್ಲಿಂ ಪೊಱಮಟ್ಟು ಬರ್ಪಿನಂ ;

ಪರಿಕಾಱನೊರ್ವನೆಯ್ತಂದು ಪತ್ತಿಸಾರ್ದು ಕಿವಿಯೊಳಿಂತೆಂದು ಆತೆಲುಂಗರಾಯನ ದುರಾಲೋಚನೆಯಂ ಸೂಚಿಪುದುಮದಂ ಕೇಳ್ದು ತಮ್ಮನಂ ಕರೆದು,—ನೀನುಮಾಳ್ಗಳನೊಡ್ಡುಗೆಯ್ದು ಬ್ಬಱಿಕೆಯೊಳ್ ನಡೆವುದೆಂದು ಬೆಸಸಿ, ಕೊಂಬುಕಾಳೆಗಳ ಕೋಲಾಹಲಂಬೆರಸು ಪೊೞಲಂ ಬಿಟ್ಟು ಪೊಱಗಣ್ಗೆ ಪೋಪಾಗಳ್ ಪೊಱವಳಯದ ಬಯಲೊಳ್ ತಮ್ಮ ಬಲಂಬೆರಸೆಡಬಲದೊಳಿರ್ದೊಡಮವರಂ ಗಣಿಸದೆ ಪೊೞಯುಂ ದಾಂಟಿ ದಾಱಿವಿಡಿದು ಮೈಸೂರಂ ಸಾರ್ದಂ.

ಅತ್ತಲ್ ತಿರುಮಲೆರಾಜಂ ರಾಜನೃಪಂ ಮಿಾಱಿ ಪೋದುದಂ ಕೇಳ್ದು—ಕಜ್ಜಂ ಕೈಗಣ್ಮಿದುದು, ಬಲ್ಲಿದನೊಳ್ ಬೇರಂ ಬಳೆದುದು. ಇನ್ನುಪೇಕ್ಷಿಸಲ್ತಕ್ಕುದಲ್ತು. ಎಂತಾನುಂ ಸಾಸಂಗೆಯ್ದರ್ಥಪ್ರಾಣಂಗಳ ನಾದೊಡಂ ವೆಚ್ಚಿಸಿಯುಮಂಗೆ ಪರಿವಂ ಕಾಣಿಪೆನೆಂದು ನೆರೆದ ನಿಖಿಲ ಪ್ರಭುಗಳಂ ಕರೆಯಿಸಿ—ಮೈಸೂರ್ಗೆ ಮುತ್ತಿಗೆಯಿಡಲ್ವೇಪಮೆಂಬುದುಂ; ಅವರ್ ವಿನಯಂಗೂಡಿ ಕೆಯ್ಮುಗಿದು—ದೇವರಾಣತಿಯನಾಂ ಶಿರದೊ ಳಾಂತೆಸಗುವರಲ್ಲದೆ ಪಡಿನುಡಿವೇೞಲ್ತಕ್ಕರಲ್ತು. ಮುನ್ನೊರ್ಮೆ ಪಿರಿ ಯರಸಂ **ಚಾಮರಾಜ**ನೆಮ್ಮೆಲ್ಲರೊಡಗೊಂಡಾಮೈಸೂರಂ ಮುತ್ತಿ ಮೂಱು ತಿಂಗಳಿರ್ದಂದಂದಿಂಗಾಮೈಸೂರ **ಚಾಮರಾಜ**ನೆಸಗುವ ಮಱಿ ಮುಯಿಲುಪಟಳದಿಂ ಪಾಳೆಯಕ್ಕೆ ಬರ್ಪ ಸಕಲವಸ್ತುಗಳುಮಿಲ್ಲದೊಂದೆರ ಡ್ಬಿಗಲುಪವಾಸಮಿರ್ದು ಪಿಂದೆಗೆದು ಪೋಪುದರ್ಕಂ ದಾಱಿಯಿಲ್ಲದೊಂದು ದಿನಂ ನಟ್ಟಿರುಳ್ ಮರ್ಬಿನೊಳೋಡಿ ಬರ್ಪಾಗಳೂರವರ್ಗೆ ಬೇಹುಸಂದು ದಾಱಿಯನಡ್ಡಗಟ್ಟಿ ಕೆಲವಾನೆಕುದುರೆಗಳನೀಟ್ಟು ಕೆಲಕೆಲರ ಕೈದು

ಗಳಂ ಸೆಳೆದಿದಿರಾದರ ಮೂಗಂ ಕೊಱೆದು ಕಳುಪಿದರ್. ಅದುಮಲ್ಲದೆ ಮತ್ತವರ ಗಾವಳಿಯಿಂ ಪಟ್ಟಣದೊಳಂ ಪದುಳವಿಲ್ಲದೆ ಬನ್ನಂಬಟ್ಟು ಮಗುೞೆ ಮೈಸೂರವರೊಳ್ ನೇಹಂಬೆರಸುವುದರ್ಕೆ ಕಾಲ್ವೆಯು ಕೊತ್ತಾ ಗಾಲಮನಿತ್ತರ್. ಅದಱಿಂದೀಗಳುಮಾಮೈಸೂರಂ ಮುತ್ತುವುದು ಮೋಸಂ. ಮೊದಲ್ ಕೆಸಱೆಯಂ ಮುತ್ತಿ ನೋೞ್ಪಂ—ಎಂಬುದು ಮದಕೊರ್ಡಂಬಟ್ಟು, ಆಗಳೆ ನಿಸ್ಸಾಳಂಗಳಂ ಪೊಡೆಯಿಸಿ ಸಂದಣಿಸಿ ಮುಂದೆ ಪರಿವ ತುರಗಂಗಳ ಪದಧೂಳಿ ಬಾಂಬೊಟಿಲ್ಗಂ, ಶಂಖಭೇರೀ ಪಣವಾನಕಗೋಮುಖಾದಿವಾದ್ಯಕಳಕಳಮೆಣ್ದೆಸೆವಳರ ಪೊೞಲ್ಗಂ ನಡೆಯೆ, ಕೆಸಱೆಗೆ ನಡೆದು ಬಳಸಿ ಪಾಳೆಯಮಿೞಿದು ತಳಿಮೋರುವೆಗಳ ನೊಡರ್ಚುತಿರ್ಪಿನಂ ;

—ಕೆಸಱೆಯ ಕಾಳೆಗ—

ಆಪೂರೊಳಿರ್ಪ **ಬೆಟ್ಟದಚಾಮರಾಜ ಚೆನ್ನರಾಜರ್** ಕೋಂಟೆ ಕೆಳಿದುಮುಗುೞಾಳ್ವೇರಿಗಳಸಿದುಮಾಗಿರ್ದೊಡಮಾಟಮಾದ ತಮ್ಮಳವನೆ ಪಡಿಯುಗುೞುಮನುದ್ಧವರಿದ ಬೀರಮನೆ ಪಡಿಗೋಂಟೆಯುಮಂ, ಬಿತ್ತರಂಬಡೆದ ಬಿನ್ನಣಮನೆ ಪಡಿಯಾಳ್ವೇರಿಯುಮಂ, ಎೞ್ತರಂಬೆತ್ತ ಶಕ್ತಿಯನೆ ಕೊತ್ತಳಮುಮಂ, ಸಾಸಮನೆ ಶತಘ್ನಿಗಳುಮಂ, ಮೊನೆಗಾಱತನ ಮನೆ ಮುಗಿಲಟ್ಟಳೆಗಳುಮಂ ಗೆಯ್ದು ಕಾದುತ್ತಿ ಕಟ್ಟಲೆಯೊಳ್ ಪೊಱಮಟ್ಟು ಪಾಳೆಯಮಂ ದೞಿದುೞಿನಾಯ್ದು ಪೊಯ್ದು ಆನೆಕುದುರೆಗಳ ನುಯ್ದು ಕೋಂಟೆಯನೊಳಪುಗಲೊಡಂ ;

ಮಱುವಗಲ್ ಪೊೞ್ತುಱೆಯುವರನಿಬರುಂ ಕೞಬ್ಗಲೆಗೊಳಲೆಂದು ಕವಿದೊತ್ತರಿಸಿ ಮೇಲ್ವಾಯ್ದು ಗುಂಡುವೞೆಗೆ ಪಲಗೆಯಂ ಮಱೆಗೊಂಡು ಕೋಂಟೆಗೇಣಿಗಳಂ ಸಾರ್ಚಿ ಸಗ್ಗಮನೇಱುವಲ್ಪಪುಣ್ಯರಂತೇಱುತಿರ್ಪಿನಂ ;

ಊರವರ್ ಕವೆಗೋಲ್ಗಳಿಂ ನೂಂಕಿಯುಂ, ಕೆಯ್ಯೆಟ್ಟಿಗಳಿಂ ಧಟ್ಟಿಂ, ಕಾಯ್ದೆಣ್ಣೆಗಳಂ ಸೂಸಿಯುಂ, ಪುರಿವೞಲಂ ಸುರಿದುಂ, ಮರ್ಧಿ

ನುರಿಯಿಂ ಚುರ್ಚಿಯುಂ, ಕವಣೆಗಲ್ಗಳಂ ಬೀಱೆಯುಂ, ಕಣೆಗಳಿಂದೆಚ್ಚುಂ ಮತ್ತಂ ಮಿಾಱೆಯೇಱೆವರ್ಪರಂ ಕತ್ತಿಗಳಿಂ ಕಡಿಕಡಿದುಂ ಕೆಡಪುತಿರ್ದೊಡಂ ಮಾಣದೆ ಮುಱುಕೊಳಸಿ ದೀವಿಗೆಗುಡಿಗೆಱಗುವ ಪತಂಗದ ಪುಱುಗಳಂತೆ ಬೀಟ್ಟುರಂ ಕಂಡು ಪೆಱಸಾರದೆ ಪಡಲ್ವಟ್ಟಟ್ಟಿಗಳನೆ ಮೆಟ್ಟುಗೆಗೆಯ್ದೇಱುತ್ತೆ ಮಿತಿಮಿಾಱುತ್ತಿರ್ದಪರೆಂಬ ವೃತ್ತಾಂತವುಂ ದೂತಮುಖದಿಂ ಕೇಳ್ದು, ತಮ್ಮ ಮೂಲಬಲಮನೊಡಗೊಂಡು **ರಾಜನೃಪನುಂ ದೇವರಾಜನುಂ** ಕಿರ್ಚುಂ ಗಾಳಿಯುಮೊರ್ವಾಗಿಯೊಣಗಿದ ಪಱುವಂ ಪುಗುವಂತೆ ಅವರ ತೆಂಕಣ ಪಡುವಣ ಪಾಳೆಯಮುಂ ಪೊಕ್ಕು ಬೀದಿವರಿದಿರ್ದಿದರಂ ಪೊಯ್ದು, ಕಾಲ್ಗೆಱಗಿದರುಮಂ, ಕಾಯುವೇಟ್ಟುದೆಂದರುಮಂ, ಪುಲ್ಗರ್ಚಿದರುಮಂ, ಪುತ್ತನೇಱಿದರುಮಂ, ನೀರ್ವೊಕ್ಕರುಮಂ, ನಿನ್ನವರೆಂದರುಮಂ, ಮರನನಡರ್ದರುಮಂ, ಮುಱಿವಿಟ್ಟರುಮಂ ತಲೆಗಾದು ಮನ್ನಿಸಿ ಮಿಕ್ಕರನೊಕ್ಕಲಿಕ್ಕಿಯವರ ಸರ್ವಸ್ವಮಂ ಸೂಱೆಗೊಂಡು ಬರ್ಪಿನಂ ;

**ಬೆಟ್ಟದಚಾಮರಾಜ ಚೆನ್ನರಾಜರುಂ** ಲಗ್ಗೆಯೇಱಿದರನನಿಬರುಮಂ ಸಗ್ಗಕ್ಕೇಱೆಸಿ ಕಿಱಿದುಂ ದಱಮನೂರೊಳಿಟ್ಟು ಮಿಕ್ಕ ಬಲದೊಡನೆ ಪೊಱಮಟ್ಟು ತಂತಮ್ಮ ಪಾಳೆಯದೊಳ್ ದಱದುಱನಾಯ್ತುದಂ ಕೇಳ್ದು ಬಿಟ್ಟೋಡುವ ತೆಂಕಣ ಪಡುವಣವರಂ ಕಳೆದು ಮೂಡಣ್ಗೆ ನಡೆದು ತಱುಬಿ ತಱಿದಿಱಿದು ತಲ್ಲಣಂಗೊಳಿಸಿ ದಾಯುಗಿಡಿಸಿ ದಯೆಗೆಯ್ದುಮರಲ್ದು ಬಡಗಣ್ಗೆ ಬರುತ್ತಣ್ಣನಂ ಕಂಡು ಕಾಲ್ಗೆಱಗಿ ಬೇಗದೊಳ್ ನಾಲ್ವರೊಡವುಟ್ಟಿದರುಂ ಪಟ್ಟಣಕ್ಕಾಗಿ ಬಿಟ್ಟೋಡುವ **ತಿರುಮಲೆರಾಜ**ನಂ ಬೆನ್ನಟ್ಟಿ ಮುಟ್ಟಿವರೆ ; ಅವನುಮುಱಿವಿಂಗಳ್ಕಿ ಬೆಳ್ಗೊಡೆಯುಂ ಬಿಟ್ಟು ಸೀಗುರಿಗಳಂ ನೀಗಿ ಚವರಮುಂ ತೆವರ್ದು ಪಱಿಯಿಗೆಯುಂ ಪಱಿದು ವಾದ್ಯಂಗಳನುದ್ಯಾಪನಂಗೆಯ್ದು ವಾರುವಮನಿಱಿದು ತೊಡವುಗಳಂ ತೊಱೆದು ಒಳ್ಳುಡೆಯನುಱಿದು ವೇಷಮುಂ ಮಾಂಜಿಯುಂಜಿ ಪೋಪುದುಂ ; ಅವನರಸುಗುಱೆಪುಗಳೆಲ್ಲಮುಂ ಕೊಂಡು ಗಂಡುಮಿಾಱೆ ಮೈಸೂರಂ ಸಾರ್ದರ್.

ಅತ್ತಲಾ **ತಿರುಮಲೆರಾಜ**ನೊರ್ವನೇ ಪಟ್ಟಣಮಂ ಪೊರ್ದಿ ಒಂದೆರಡ್ದಿನದೊಳ್ ಬಂದು ಸೇಱುಯಟ್ಟಿದುಟ್ಟಿದರಂ ಕರೆಯಿಸಿ—ಕೊಳುಗುಳದೊಳೆಮ್ಮ ದಟಿದೊಳಟ್ಟಿದರಾರ್ ? ಏಱುವಡೆದರಾರ್ ? ಸೆಱೆಸಿಲ್ಕಿದರಾರ್ ?—ಎಂದು ಬೆಸಗೊಂಬುದುಮವರ್ ಬಿನ್ನವಿಸಿದರ್ :—

ಜೀಯ ! ಬಿನ್ನಪಂ. ಈಪೊಳನಾಡ ಪ್ರಭುಗಳನಿಬರುಂ ಪಲವುಂ ಸೂಟಿಯೊಳ್ ಮೈಸೂರವರಿಂ ನೊಂದವರೆಸಗುವ ಪುಯಿಲ ಚಾತುರ್ಯಮನವರ್ ಬರ್ಪ ಬಟ್ಟೆಗಳಂ ತಿಳಿದಿರ್ಪುದಱಿಂದವರ ಮೂವಂಕದ ಕೊಂಬುಗಾಳೆಯ ದನಿಗೇಳ್ದುದುಂ, ಸಿಂಗದ ರವಂಗೇಳ್ದಾನೆವಿಂಡಿನಂತೆಯುಂ ತಳವರರದಿರ್ಗೋಲುಲಿಗೇಳ್ದ ಮುಱುಗಳ್ಳರಂತೆಯುಂ, ಮಾಂತ್ರಿಕರ ಮಂತ್ರಾಕ್ಷರಂಗಳಂ ಕೇಳ್ದ ಪಂದೆಮರುಳ್ಗಳಂತೆಯುಂ, ಪಾಂಚಜನ್ಯಝುಂಕಾರಂಗಳಂ ಕೇಳ್ದ ರಾತ್ರಿಂಚರರಂತೆಯುಂ, ನಾರಾಯಣನ ನಾಮಮಂ ಕೇಳ್ದ ಪಾಪಂಗಳಂತೆಯುಂ ಬೆರ್ಚಿ ಬಿಗುರ್ತು ಬಿಂಕಂಗುಂದಿ ಬೇವಸಂಗೊಂಡು ಬೆದಱಿ ಬೀದಿವರಿದು ಸರಿಯುತ್ತೆ ಇರ್ತರದೊಳ್ ನಿಂದು ನಿಂದಿಸಿ ನೀಟ್ಟರಿಪರಂ ನಿಟ್ಟಿಸದೆ ಸಿಟ್ಟೋಟದೊಳ್ ನಿಂದಲ್ಲಿ ನಿಲ್ಲದೆ ನಿಜನಿವಾಸಮಂ ಸಾರ್ದು ಜಸಮಂ ಜಾಱಿಸಿಯುಸುವನಾದರಿಸಿ ಪೊಸತೊಂದು ಬಸಿಱಿಯೊಳ್ ಬಂದಂತೆ ಸಂತಸದೊಳ್ ಜವೆಗೊಂಕದಿರ್ದಪರ್. ಮೊರಸುಮೋಹರಂ ಮೊನೆಗಾಱತನದ ಮೋಡಿಯೊಳ್ ಮುಂತಱಿಯದಿರ್ಪನಮವರ್ ಮೋಸಂಗೊಂಡು ಮುತ್ತಿ ಮೊಗಗಿಡಿಸಿ ಮೋದಿ ಮೂದಲಿಸಿ ಮೂಗಂ ಕೊಯ್ದು ಮೊಱೆಯಿಡಿಸಿಯುಱೆಯಟ್ಟಿ ಕೆಟ್ಟು ಮುಱಿದೋಡಿದರ್. ಮಲೆನಾಡವರ್ ಮಲೆತುನಿಲ್ವನಮವರ್ ವೇಢೈಸಿ ಬಿಗಿದಿತ್ತತ್ತಲಿಸಿಸುಂ ಮಿಸುಕಲೀಯದೆ ಕೆಯ್ಯಕೈದುಗಳನೀಡಾಡನೆಕುದುರೆಗಳಂ ಬಸಂಗೆಯ್ದು ಅವರೊಳ್ ಕಟ್ಟರಸುಗಳಂ ಕ್ಕೈಸೆಱೆಗೊಳಲುಟ್ಟಿದ ಕಿಱುದೊರೆಗಳ್ ಕಪ್ಪಿನೊಳ್ ಬಿಟ್ಟ ಪೇರಾನೆಯಂ ಬಱಸಂದ ಮಱಿಗಳಂತೆ ಚೀಱುತ್ತೆ ಕಟ್ಟುರದಿಂ ಮಲೆಯುಂ

ಸಾರ್ದಿತ್ತಣ್ಗೆ ಮೋಸದೊಳಾದೊಡಮಿನ್ನೊರ್ವನುಂ ಬರಲಣ್ಮನೆಂದು ಬಾಸೆಗೆಯ್ದೋಡಿದರ್. ಬೇಡವಡೆ ಮುನ್ನಡವಿಯೊಳ್ ಗಿಡುಮರಂಗಳ ಮಱಿಯೊಳ್ ಪೊಂಚಿ ಬಟ್ಟೆಗರಂ ಕೋವಿಯೊಳಿಟ್ಟು ಕಣೆಯಿಂದೆಚ್ಚು ಕೆಡಪಿ ಬಟ್ಟೆಗಳಂ ಸುಲಿದ ಪಾಪದಿಂ ಕೆಸಱಿಯು ಕೆಱಿಯು ಕೋಡಿವಳ್ಳದೊಳೋಡಿವರುತ್ತೆಡಪಿ ಕಾಲುಲುಂಕಿಯುಂ ಮೊಟಕಾಲ್ಮುಱಿದುಂ ತೊಡೆಯುಡಿದುಂ ನಡು ನೆರ್ಗಿಯುಮೆರ್ದೆ ಬಿಱಿದುಂ ತೋಳ್ ತೊಲಗಿಯುಂ ಕೊರಲ್ ಕುಗ್ಗಿಯುಂ ತಲೆಯೊಡೆದುಂ ಪಡಲಿಟ್ಟು ಪಾಸಿದಂತಾಗಿ ಪಳ್ಳದಿಂಟೆಗಳ್ ಸಮತಳವಾದೊಡಂ ಪಿಂದೆ ಬರ್ಪರುಮಾನೆಕುದುರೆಗಳ್ ತುಳಿದುದಱಿಂ ಮಟ್ಟಿಯಾದರ ತಲೆಮಿದುಳ ಬಸಿರ್ಗರುಳ್ಗಸಱೊಳ್ ಸಿಲ್ಕಿ ಮೊನೆಯೆಲ್ವು ಮುಳ್ಗಳಡಿದಳದೊಳ್ ನಾಂಟೆ ತಟ್ಟುರ್ಚೆ ತಡಬಡಿಸುತಿರೆ ಪಿಡಿಪಿಡಿದು ತುಟಿವೆರಸು ಮೂಗಂ ಕೊಱಿದು ಪಲ್ಗಿಱಿಸಿ ಕಳುಪೆ : ಮೂಗಱಿದುಸಿರುಱಿದುದರ್ಕೆ ಪೆರ್ಕಳಿಸಿ, ತಲೆಗೆ ವಂದುದೆವೆಯೊಳ್ ಪೋದಂತೆ ಸಂತಸದಿಂ ಚಿಂತನಕಲ್ ಮುಂತಾದ ತಂತಮ್ಮ ನೆಲನಂ ಸಾರ್ದರ್. ಮತ್ತಂ ರಾವುತಪಾಯಕರ್ ಪೌಜೊಡೆಯುದೆ ಪೊಱಗೆ ನಿಂದು ಪುಯಿಲೊಳ್ ಪೊಲಂಬುಗೆಟ್ಟುದಂ ನಿಟ್ಟಿಸಿಯೋಡಿಪೋದರ ಪೆಂಡಿರೋಲಿಯುಱಿದುದೆಂಬ ನಾಱ್ನುಡಿಗೀಡಾಗಿ ಪಾರುವಂಗಳಂ ಪರಿಸುವುದಱಿಂ ದೆಟ್ಟಿ ದೂಳಂ ಚಮ್ಮಟಿಗೆಯು ಪೊಯ್ಲಿಂದೊಡೆದ ಕುದುರೆಯು ತೊಡೆಯು ನೆತ್ತರ್ವೊನಲಿಂದಡಂಗಿಸುತ್ತೆ ಬೆಂಬತ್ತಿ ಬರ್ಪರಂ ಮುಱಿಮುಱಿದು ನೋಡುತ್ತೆ ಮತ್ತಡಿಗಡಿಗೆ ಮಡದಿಂ ಪಕ್ಕಮನೊತ್ತುತ್ತೆ ಕತ್ತಿಯು ಪರಜಿನಿಂ ನೆತ್ತಿಯಂ ತಿವಿಯುತ್ತೆ ಮುಂದಿರ್ಪ ಪಳ್ಳಕೊಳ್ಳಂಗಳಂ ತೆವರ್ದಿಂಟೆಗಳಂ ಕಲ್ಮುಳ್ಗಳಂ ಬೇಲಿಬೆಳ್ಳಾರಂಗಳುಮನಱಿಯದಱಿಯುಟ್ಟುತ್ತೆ ಪೊಲಗೆಟ್ಟು ಬಗೆಯೊಳ್—ನೆಲಂ ಬಾಯ್ದೆಱಿಯದೆ ? ಅದೃಶ್ಯಾಂಜನಮನುಗೂಡದೆ ? ಎಱಂಕೆಗಳ್ ಮೊಳೆಯವೆ ? ಎಮ್ಮೊರ್ದಿನಾರದೆ ? ದೇವರುಂ ನೆರವಾಗರೆ ? ಇವರ್ಗಾದೊಡಂ ದಯೆದೋಱದೆ ?—ಎಂದು ಬಗೆ

ಯುತ್ತೆ ತಂದೆಯಾದೊಡಂ ಕಂದನಾದೊಡವೊಡವುಟ್ಟಿದನಾದೊಡವೊಡ ನಾಡಿಯಾದೊಡಂ ಮತ್ತಂ ತನ್ನೊಡೆಯನಾದೊಡಂ ಬಿಟ್ಟವನನೆತ್ತದೆ ಪಿಂತಿರುಗಿ ನೋಡವೋಡಿಸೆ ಬಸವಱಿದು ಮುಱ್ಗ ಮೊಱಿಕಾಲೂರಿ ಮುಂಗೆಡುವ ವಾರುವಂಗಳ ವಾಗೆಯುಂ ಪಿಡಿದು ಜಡಿದೆತ್ತುತ್ತೆ ಇತ್ತಣಿಂ ಬಂದೆವಿತ್ತಣ್ಗೆ ಪೋಪೆವಿಲ್ಲಿಗಿದು ದಾಱಿಯೆಂಬಾರಯ್ಕೆದೋಱದೆ ಕುದುರೆಯಱಿವನ್ನುಮುಸಿರ್ಕಱಿವನ್ನಂ ದೆಸೆಗೆಟ್ಟೋಡಿದರ್. ಮೂಲಬಲಂ ಮುಱಿದ ತೆಱಂ ದೇವರ ಬಗೆಯೊಳ್ ತಿಳಿದಿರ್ಪುದೈಸೆ ; ಆಂ ಬಿನ್ನವಿಪುದೇನಿರ್ಕುಂ ?-ಎನೆ ;

ಕೇಳ್ದು ಮನದೊಳ್—ಅಕಟಕಟಾ ! ಈ ಕೂಟದ ದಳಂಗಳೆನಿತಾನುಮಿರ್ದೊಡಂ ಒಱಿಸಲ್ಲದು. ಈ ದಱಿನಾಯರ್ ಚೆನ್ನಮನಾಯಕನುಂ ಈ ಪ್ರಧಾನಿರಾಮಾನುಜಯ್ಯನುಂ ಎನ್ನೆಡಬಲದೊಳಿರ್ದುಮೆನ್ನ ಮೇಲ್ವಿಟ್ಟ ಪುಯಿಲ್ಗೊಱಿಯುಂ ಪೋರುವರಂತೆ ಮುಂತಣ್ಗೆ ನಡೆದು ಮೊಗವಱಿಯುಪ್ಪುದುಮೆನ್ನನೊಪ್ಪಿಸಿ ತಪ್ಪುದಾಱಿವಿಡಿದೊಪ್ಪದಿಂ ನಡೆದರ್. ಆನಿನ್ನೆವರಮಿವರಂ ಮನ್ನಣೆಯಿಂದೋವಿದುದು ಕಾಡೊಳಟ್ಟಿಂತೆಯುಂ ಕಲ್ಲಱಿಯೊಳ್ ಕಡಲೆವಿತ್ತಿದಂತೆಯುಂ ಅಂಧನೊಳಾಡಿದಂತೆಯುಂ ಬಧಿರನೊಳ್ ಪಾಡಿದಂತೆಯುಂ ಮಱಲಂ ಪಿಱಿದಂತೆಯುಂ ಉಯ್ಯನಗಿದಂತೆಯುಂ ಪಱ್ತಯುಂ ತುತ್ತಿದಂತೆಯುಂ ಕೊಡನಂ ಕೌಚಿ ನೀರನೆಱಿದಂತೆಯುಂ ಆದುದು. ಇವರಂ ನಚ್ಚಿ ಮೈಸೂರವರೊಳಿದಿರ್ಚಿದೆಂ. ಅಱಿತಱಿತುಮಱಿಯುದನಾದೆಂ. ಕೊಡೆಯುಂ ಮಱಿಗೊಂಡು ಸಿಡಿಲ್ಗಿದಿರೇಱಿದೆಂ. ಜಾಯಿಲ ವಾಲಮಂ ಪಿಡಿದು ಜಾಹ್ನವಿಯುಂ ದಾಂಟಲೆಳಸಿದೆಂ. ಪೞವೊಱದೆಱಂಕೆಯಿಂ ಪಾಱಲ್ಬಯಸಿದೆಂ. ಕಳಸದ ನೀರಿಂ ಕಾಟ್ಕಿರ್ಚ ನಡಂಗಿಸಲೊಡರ್ಚಿದೆಂ. ಮುಚ್ಚುಮಱಿಯೇಂ ? ಮೋಸವೋದೆಂ. ಮುಂತೆನಗೆ ಗತಿಯಾವುದು ? ಪಸಿದ ಪಾವನೇಱುಗಂಡೆಕ್ಕಲನಂ ಸೊರ್ಕಿದಾನೆಯನೀರ್ಡ ಪುಲಿಯುಂ ಕಣ್ಮಱಿಗಳೆದ ಸಾಳ್ವನಂ ಸಿಟ್ಟೆಟ್ಟಿ ಸಿಂಗವುಂ

ಕೆಣಕಿ ಕೆಟ್ಟೆಂ. ಇನ್ನೀಪಟ್ಟಣದಾಸೆಯುಂ ಬಿಟ್ಟು ಪರಿವುದೇ ಪದುಳಂ. ಅದಱಿಂ ಮಱಿವುಯಿಲನೆಸಗಿ ಮುಟ್ಟಿಗಸದಮುನ್ನಮೆ ಬಟ್ಟೆಗಳಂ ಕಟ್ಟಿಬಾಧಿಸದ ಮುನ್ನಮೆ ದಟಿದುಟಿವಾಯ್ದುದಾಯಂಗೆಡಿಸಿ ಕಟಿಬ್ಗಲಿ ವಿಟ್ಟು ಕೈಸೆಱೆಗೊಳ್ಳದ ಮುನ್ನಮೆ ಮೋಸಂಗೊಂಡು ಮೂಗನರಿಯದ ಮುನ್ನಮೆ ಸಾಗುವೆಂ—ಎಂದು ಪಯಣಸನ್ನದಂಗೆಯ್ಯುತ್ತಿರ್ದಂ.

ಅತ್ತಲಾಪುಯಿಲೊಳ್ ನೊಂದು ಪೊಟಲ್ಗಳಂ ಪೊರ್ದಿದ ತಳಕಾಡೆಳವಂದೂರಮ್ಮಚನಾಡಿ ತಗಡೂರ್ ಮೊದಲಾದ ಮೈಸೂರ ನೆರೆದೊರೆಗಳ್—ಎಮಗಿನ್ನುಟಿವಿಲ್ಲ, ಎಂತಾದೊಡಂ ತೆಲುಂಗುರಾಯಂಗೆ ಧೈರ್ಯಮಂ ನೆರಪಿಯುವನ ಮಱೆಯೊಳುಟಿದ ಕಾಲಮಂ ಕಳೆವೆವು, ಅವನಟಿಪಿನೊಳಟಿವೆವೆಂದನಿಬರುಮೊಂದಾಗಿ ನಿಯೋಗಿಯನೊರ್ವನಂ ಕಳುಪಲೊಡಮವಂ ರಾಯನಂ ಸಂಧಿಸಿ—ಅಂದು ಮೊರಸ ಬೇಡ ಮಲೆನಾಡವರ್ ಬಂದು ಬೆರಸಿರ್ದುದಱಿಂದವನೊಡನೆಲ್ಲರುಂ ಪಂದೆಗಳಾಗಿ ಪುಯಿಲೊಳ್ ಪೊಲಂಬುಗೆಟ್ಟುದು. ಆದರ್ಕೆ ಮನದೊಳ್ ಕಕ್ಕುಲಿತೆಗೊಳಲ್ಕೆ ಕಾರಣಮಿಲ್ಲ. ಇನ್ನುಮವರ್ ಮುನ್ನಿನಂತೆಣಿಸಿ ಮೆಯ್ಮಱೆದೆಮ್ಮಂ ಬಗೆಯದೆ ಕಟ್ಟಿದಟೆಂ ಪಟ್ಟಣಮಂ ಮುತ್ತುವರ್. ಆಗಳಾಮವರ ಪಾಳೆಯಮಂ ದಟಿದುಟಿವಾಯ್ದು ಸೂಡುಪಾಡಂ ಮರಲ್ಚುವೆವು. ಇದು ನಿಶ್ಚಿತಂ. ಇನಿತಱಿಬಳವರುಪಟಳಕ್ಕೆ ಬೆಚ್ಚದೆಮ್ಮಂ ನಚ್ಚಿರ್ಪುದು—ಎಂದನಿಬರುಂ ಕಳುಪಿದ ಬಿಸೆವತ್ತಳೆಗಳನಿತ್ತು ಬಿನ್ನವಿಪುದುಂ ;

ಆ ತಿರುಮಲೆರಾಜಂ—ಅಕಟಕಟಾ ! ಇರುಳ್ಕಂಡ ಪಳ್ಳದೊಳ್ ಪಗಲ್ ಬೀಳ್ವರೆ ? ಅಟ್ಟಿಪಿಡಿದವನಮನೆಯೊಳವಿದುಕೊಳ್ವರೆ ? ಪೋಪ ಮಾರಿಯುಂ ಕೂಗಿ ಕರವರೆ ? ತಳನನಗುಟ್ಟಿ ಮೇಲೆ ಕೆಡಪಿಕೊಂಬರೆ ? ತಲೆದಾಗಿಯುಂ ನಿಮಿರ್ದಪರೆ ? ಮುಗ್ಗಿವಿಟ್ಟುಂ ಮೂಗುಮೇಲೆಂಬರೆ?—ಎಂಬ ಮಾತೇನಿನ್ನರಮನೆಯ ಸೀಮೆಯೊಳ್ ದಾಟಿಟ್ಟು ತುಱುಸೆಱೆಗೊಂಡುದಱಿಂದಂದಂದಿಗೆ ವರ್ಷ ಧನಧಾನ್ಯಂಗಳಡಂಗಿ,

ಸಂಚಿತಂಗಳುಂ ಷವೆುದು, ಆನೆಕುದುರೆಗಳ ವೋೞುಗಳ್ಗಂ ಜೋದ ರಾವುತಪಾಯದಱದ ಜೀವಿತಂಗಳ್ಗಂ ಅರವುನೆಯೊಡವೆಯೊಳವುಗರದ ತೆಱಗೆಯೊಳಂ ದೇಗುಲದುಪಕರಣಂಗಳೊಳಂ ಪರದರ ಬಣಂಜದೊಳಂ ವುತ್ತವೇಂ ದಂಡದೊಳಂ ಕವರ್ತೆಯೊಳಂ ತೀಱದೆ ದಂದುಗಂಗೊಂಬುದೆ ನಿತಾನುವುುಂಟು. ಅದುವುಲ್ಲದೆ ಪಟ್ಟಪಗಲ್ ನಡುವಟ್ಟಣದೊಳ್ ತಳವ ಱನ ತಲೆಗೊಯ್ದುರ್ ; ಕಾವಲಿಗರಂ ಕಡಿದೊಟ್ಟಿದರ್ ; ಅಧಿಕಾರಿಯುನ ಱಿಯುಟ್ಟಿದರ್ ; ಅರವುನೆಗೇೞ್ತರ್ಪರನಡ್ಡನಾಯ್ದು ಪೊಯ್ದರ್ ; ಕತ್ತಿ ಯೂಱಗದವನಂ ಕತ್ತರಿಸಿ ಕತ್ತಿಯನೀೞ್ದರ್ ; ಸಂಚಿಯುವನಂ ಪೊಂಚಿ ಸದೆದು ಕಂಚುವಿುಂಚಾದರ್. ಅವಕೇಣವುಂ ತೊಟ್ಟು ವುನಂವುುಟ್ಟಿ ನಡೆಯಿುಸಿದೊಡೆ ಪೊೞ ಬಳಸಿದುದೆ ಪುಸಿಯೆನಿಸುವರ್ ; ಕೋಂಟೆಯುಗ ೞ್ಗಳಂ ದಿಂಟೆವಳ್ಳಂಗಳನರೆಗಳಿಗೆಯೊಳ್ ಸವುತಳಂಗೆಯ್ವರ್ ; ವೂಡುವ ಪೊೞ್ತಿಂ ವುುಚ್ಚಿವಾಂಜುವರ್ ; ಬೀಸುವೆಲರಂ ಪಿಡಿದು ನಿಲಿಸುವರ್ ; ಕಗ್ಗಲ್ಲಂ ಮೆಲ್ಲಿತೆನಿಸುವರ್. ಅಂತಾದೊಡವೆುನ್ನೊಳ್ ವುುನ್ನಿನ ಕೆಳೆಯ ನೆಂದುಂ ವುುದುಪನೆಂದುಂ ಬಲ್ಲರಣಿಗನೆಂದುಂ ಬಸಗೆಟ್ಟನೆಂದುಂ ತಱಹರಿ ಸಲಾಱನೆಂದುಂ ತಾನೆ ಪೋಪನೆಂದುಂ ದಯೆಗೆಯ್ದೆನ್ನುವುನೆನ್ನಂತವುರ ವುುವುಂ ವುನ್ನಿಸಿರ್ಪರ್. ಆದೊಡವುರವುನೆಯ ವುನೆವಾೞ್ತಿಗಂ ತೆಱ ನಿಲ್ಲದೆ ಬೊವ್ಮುವುರದವರ್ ಒದಾಳಿ ಪಾರ್ವರೆಂದೊಲ್ದು ವೈಸೂರವರವ ರೂರಂ ಸೂಱೆಗೊಳ್ಳದೆ ತುಱುಸೆಱೆಗೆಯ್ಯದೆ ಕಾಪಿಟ್ಟುದಱಂದಾವೂರೊ ಳ್ಪೆಳೆದ ಕಟವೆಯೊಳನಿಸಿನಿಸಂ ಕಳ್ದು ತರಿಸಿನ್ನೆವರಂ ಕಾಲಂಗಳೆದೆಂ. ಇನ್ನಿ ಲ್ಲಿರ್ಪುದಿಲ್ಲ, ತಾವಿುರ್ಪಲ್ಲಿಗೆ ವರ್ಪೆಂ—ಎಂದು ಬೆಸಸಿ ಕಳುಪಿದಂ.

ಬಱಕ್ಕವರಾವೃತ್ತಾಂತವುಂ ಕೇಳ್ದು ಆಳ್ದನಾಪತ್ತನೊತ್ತರಿಪೆ ವೆಂದು ತವುುಳ್ಳ ಧನಧಾನ್ಯಂಗಳಂ ವುರ್ದುಗುಂಡುಗಳಂ ಬಾಣಬತ್ತಿಗ ಳ್ಮೊದಲಾದೆಲ್ಲಾವಸ್ತುಗಳಂ ಕೊಂಡು ಬಂದು ಪಟ್ಟಣವುಂ ಪುಗಲೆಂದು ಬಡಗಣ ಪೊೞಯ ಪೊಱಗಡೆಯೊಳ್ ಪಾಳೆಯವಿೞದರ್.

ಇತ್ತಲಾರಾಜನೃಪನೀಯೆಸಕಮನಾರಯ್ದು ಕೆಸಱಿಯ ಪುಯಿಲೊಳ್ ಬಸಗೆಯ್ದಾನೆಕುದುರೆಗಳ ಬಳಗದಿಂ ಬಳೆದ ದೞಮಂ **ನರಸರಾಜ**ನೆಂದು ನೆಗೞ್ತೆವೆತ್ತ ತನ್ನ ಪಿರಿಯಣುಗನ ಬೞಿಯೊಳ್ ಕಳುಪುವುದುಂ; ಆವಂ ಕಣ್ಣೆವೆ ಮಿಸುಕಿದಂತವರ ಪಾಳೆಯದ ಮುಂತಣ್ಗೆ ವಂದು ನಿಂದು, ಭಟನೋರ್ವನಂ ಕರೆದು, ನೀನವರ ಬೞಿಯಂ ಸಾರಿ,—ವೈರಿರಾಜವೇಶ್ಯಾಭುಜಂಗನೆನಿಪ ರಾಜನೃಪನ ಕುವರಂ ಕೂಡಾಳ್ಗಳ ಗಂಡನಾದ ನರಸರಾಜನಱಿಕೆಗಾಳೆಗಂಗೊಳಲ್ಬಂದಂ. ನೀಂ, ಇಂದು ಮೆಯ್ಮಱತಿರ್ದೆವು, ಮದವೇಱಿರ್ದೆವು, ಮಱವಟ್ಟಿರ್ದೆವು, ಮರುಳಾಗಿರ್ದೆವು, ಪಸಿದಿರ್ದೆವು ಬೞಲ್ದಿರ್ದೆವು, ಉಣುತಿರ್ದೆವು, ಒಱಗಿರ್ದೆವು ಎಂದು ಪಿಂದೆ ಗೞಪದೆ ಟ್ಟಿತ್ತು ಸನ್ನದವಾಗಿ, ಬಗೆವಂದಾಗಳ್ ಬರ್ಪುದು—ಎಂದು ಮೂದಲಿಸಿ ಬೆಸಸಿ ಕಳುಪೆ; ಆವಂ ಪಸಿದೆಯ್ದುವಂದು ಅಂತೆ ಪೇೞಲೊಡಮವರ್ ನೋೞ್ಪಿದೆಟ್ಟು ಆವಂ ಮರಲ್ದು ಬರ್ಪುದರ್ಕೆ ಮುನ್ನಮೆ ಕವಿತರ್ಪುದುಂ; ನರಸರಾಜಂ ಮುಂ ರಕ್ಕಸರನೊಕ್ಕಲಿಕ್ಕಿದ ಕುವರನಂತೆ ಶಕ್ತಿಧರನೆನಿಸಿ, ಕೊಂಚವೆಟ್ಟಂ ತಟ್ಟುರ್ಚಿದಂತೆ ತಾಱುಂತಟ್ಟಾಗಿ ಕೆಡಪಿ ಮಟ್ಟಿಡುವುದುಂ; ಅವರ್ ಕೆಟ್ಟು ಮುಱಿದೋಡಿ ಬಡಗಲ್ ಗಾವುದದೊಳಿರ್ಪ ಕೋಡಾಲಮಂ ಪುಗಲೊಡನೀತನುಂ ಬೆಂಬತ್ತಿ ಸುತ್ತಿರ್ಪಿನಂ; ಒಳಗಿರ್ದ ದೊರೆಗಳನಿಬರುಂ ಕಡುವಿಸಿಲೊಳ್ ಪರಿತಂದು ಪಸಿದಿರ್ದುದಱಿಂ ನೀರಱ್ಕೆಗೊಂಡು ಬಾವಿಯುನಱಿಸಿ ಬನ್ನಂಬಟ್ಟು ಬಾಯೊಣಗಿ ಬಸಗೆಟ್ಟು ಅಲ್ಲಿರ್ಪ ತಿಪ್ಪೆವಳ್ಳದೊಳ್ ಪಾವಸೆಗಟ್ಟಿ ಬಣ್ಣಂಗುಂದಿ ಕೊೞೆತು ಪುೞುತು ಪೊಲಸುಗಂಪಿಡುವ ನೀರನೆ ಕುಡಿದು ಸಂಜೆವರೆಗಮುಸಿರ್ವಿಡಿದಿರ್ದು ಮಱ್ದಿನೊಳ್ ಪೊಱಮಟ್ಟು ಓರೊರ್ವರೊಂದದೆ ಪರೆದು ಪೋದರ್.

ಮಱುವಗಲ್ ತಿರುಮಲೆರಾಜಂ ನರಸರಾಜನ ವಿಜಯವಾರ್ತೆಯಂ ಕೇಳ್ದು, ಎತ್ತಾನುಮಾತನಾಪಡೆವೆರಸು ಬಂದು ಪಟ್ಟಣಮಂ

ವೇಷ್ಕೈಪನೆಂದಳ್ಕಿಯೊಡಲಂ ಬಿಡುವ ಜೀವನಂತೆ ಪಲತೆಱದೊಳ್ ಪಲುಂಬಿ ಕೊಱಗಿ ಕೋಟಲೆಗೊಂಡು ಪೆಣ್ಡಿರಂ ಬಿಟ್ಟು ಪಟ್ಟಣದಿಂ ಪೊಱಮಟ್ಟು ಗತಪುಣ್ಯರ್ ಸ್ವರ್ಗದಿಂ ದುರ್ಗತಿಗಿೞಿವಂತೆ ತಳಕಾಡ ಬೞಿಯ ಮಾಲಂ ಗಿಗೆಯ್ದಿ ಮೆಯ್ಮಱಸಿದಂ.

ಬೞಿಕ್ಕೆ ನರಸರಾಜಂ ರಾಜನೃಪಂಗೆ ಈ ವಾರ್ತೆಯಂ ಬಿನ್ನವಿಸಿ ಕಳುಪುವುದುಂ ; ಸೋದರನನೊಡಗೊಂಡು ಪಟ್ಟಣಕ್ಕೆ ನಡೆತಂದು ಊರ ಮುಂದಣ ಬಯಲೊಳಿೞಿದಿರ್ದ ಕುವರನಂ ಕೂರ್ಮೆಯಿಂದಪ್ಪಿ ಸಂತಸಂ ದಳೆದು ಸನ್ನುತಿಗೆಯ್ದು ಪೊೞಲಂ ಪುಗಲೆಳಸಿಯುಂ, ಪರಿವ ಪಾವಂ ಉರಿವ ಕಿರ್ಚಂ ಮೆಯ್ಗೊಂಡ ಮರುಳಂ ಪೆಱರ ಪೆಂಡಿರಂ ಪತ್ತೆಸಾರ್ವುದು ಪಾಟಿಯಲ್ತೆಂದು ಅಲ್ಲಿಯೆ ನಿಂದು, ತಿರುಮಲೆರಾಜನ ರಾಣಿಯಾದ ರಂಗ ಮ್ಮನೆಡೆಗೆ ಮುತ್ತ ಮುದುಪನನೊರ್ವನಂ ಬೆಸಸಿ ಕಳುಪಲೊಡಮವಂ—ಹದಿಬದೆಯರ್ಗೆ ಗಂಡನಂ ಬೞಿಸಲ್ವುದೆ ಬಲ್ಲವಿಕೆ. ನೀಂ ನಿಮ್ಮಡಿಗೆ ತೊಡಿಗೆಗಳುಮನೂೞಿಗವೆಣ್ಗಳುಮನೊಡಗೊಂಡು ಪೋಪುದರ್ಕೆ ತಕ್ಕ ದಂಡಿಗೆಗಳುಮಂ ಭಂಡಿಕುದುರೆಗಳುಮನೊಡಗೊಂಡು ಬಂದೆಂ, ತೆರ ಳ್ವುದು—ಎಂಬುದುಂ ;

ಆನುಡಿಗೇಳ್ದು, ಮುಂತೆನ್ನ ಮನದೊಳ್ ಈರಾಯಂ ಬಿಟ್ಟುಪೋದ ನಿನ್ನೇನಪ್ಪುದೋ ಎಂಬ ಚಿಂತಾಸಾಗರದೊಳ್ ಮುೞುಂಗಿದ ಮೂಗುಬ್ಬ ಸಮಿೞಿದು,—ಎಲೆಯಣ್ಣ ! ನೀನುಂ ಮಡದಿಮಕ್ಕಳ್ವೆರಸು ಕಟ್ಟೈಸಿರಿ ಯೊಳ್ ನೂಱು ಬರಿಸಂ ಸೊಗನಾಳ್ ! ಎಂದು ಪರಸಿ, ಸಂತಸಗದುಬಿ ನೊಳ್ ಕೆಳದಿಯರಂ ಕರೆದು, ರಾಜನೃಪಂ ನೆವಮಿಲ್ಲದೆಱಕದೊಳಿಂದೆ ನ್ನನೆಮ್ಮಾಳ್ದನ ಬೞಿಗೆ ಕಳುಪುವಂ, ಪೋಪಮೆಂಬುದುಂ ; ಅವರವರ್ ತಂತಮ್ಮ ಕಟ್ಟಳೆಯೂೞಿಗಂಗಳನೆಸಗುತ್ತೆ ಬೞಿವರೆ, ರಾಣಿ ಪೊಱಮಟ್ಟು ರಂಗೇಶರಂಗನಾಯಕಿಯರ್ಗೆ ವಂದನೆಯಂ ಗೆಯ್ದು ಅಂದಳಮೇಱಿ ಯೂರ ಪೊಱಗಣ್ಗೆ ವಂದು, ರಾಜರಸನ ಪೌಜಂ ಕಿಱಿದುಂ ದೂರ

ದೊಳ್ ಕಂಡು ನಿಂದು, ಕೆಳವಿಗೆಳದಿಯೊರ್ವಳಂ ಕರೆದು, ನೀಂ ರಾಜನೃಪನ ಸಮ್ಮೊಗದೊಳ್ ನಿಂದು ಎನ್ನ ನುಡಿಯಿಂದೆ—ಎಲೆ ತಂದೆ, ಕೇಳೆನ್ನರಸನುಮೂರೊಳಗಿಲ್ಲದೆ ಮೆಯ್ಗಾವಲಿಗರುಂ ಪೋಗಿಯಾನೋರ್ವಳೆಂ. ಎನಗಮೆಮ್ಮೊಳಿಗಮೆಣ್ಗಳ್ಗಮೆನ್ನ ಮನಮುಮಂ ಮಾತುಗಳುಮಂ ಕಾವಲಿಟ್ಟು ಕಡಲೊಳ್ ಮುಳುಂಗಿ ಕೈಗೆಟ್ಟಂತಿರ್ಪಳನೆತ್ತಿ ಸಲಪಿಯೆನ್ನಾಳ್ದನೆಡೆಗೆ ಕಳುಪಿದೆ. ಪ್ರಾಣಮಾನಂಗಳೊಡನೆಮ್ಮ ಕುಲಧರ್ಮಮಂ ಕಾಪಿಟ್ಟು ಮನ್ನಿಸಿದೆ ಇಂದಾಂ ನಿನ್ನ ಬೆನ್ನೊಳಂ ಬಸಿಱೊಳಂ ಬಂದೆಂ. ನೀನೆನ್ನ ಪರಕೆಗಳಿಂ ನಳನಹುಷಸಾಭಾಗರಂತೆ ಇಳೆಯನಾಳ್ದು ಪಗೆಗಳಂ ಗೆಲ್ದು ಪೊರ್ದಿದರಂ ಪೊರೆದು ಪಾರ್ವರ್ಗಿತ್ತು ಮಿತ್ರಕಳತ್ರಪುತ್ರಪೌತ್ರರ ಮೇಳದೊಳ್ ಸೊಗನಾಳಿಂದು ಬಿನ್ನವಿಸಿ ಬರ್ಪುದು ಎಂದು ಕಳುಪೆ; ಅವಳಂತೆಗೆಯ್ದು ಮರಳ್ದಳ್.

ಬಳಿಕ್ಕೆ ರಾಜನೃಪಂ ನಂಬುಗೆಯೊಳ್ ಪೂರ್ಣಕುಂಭಂಗಳಂ ಕೊಂಡು ಪರಸುತ್ತಿದಿರ್ವರ್ಪಗರದ ಪಾರ್ವರಂ ಬಲಗೊಂಡು, ಇರ್ತರದೊಳ್ ಕೆಯ್ಯೆತ್ತಿ ಪೊಗಟ್ವ ಕೈವಾರಿಗಳ ಕೊರಲುಲಿಗೆ ಕೊಬ್ಬುತೆ, ತಂತಮ್ಮ ಕೇಱುವಾಗಿಲ ಸರಿಸದೊಳ್ನಿಂದು ಆರತಿಯೆತ್ತಿ ಸೇಸೆಗಳಂ ಸೂಸುವ ಪಾರ್ವಿತಿಯರ ಪರಕೆಗೊಂಡು, ಅವರ್ಗೆ ಬಣ್ಣಬಂಗಾರಂಗಳನಿತ್ತು ರಂಗೇಶನ ಸನ್ನಿಧಿಗೆಯ್ದಿ ಬಲವಂದು ವಂದಿಸಿ ಹಸಾದಂಗೊಂಡು ಕಾಣ್ಕೆಯಿತ್ತು ಅರಮನೆಯ್ಗಂ ಪೊಕ್ಕು, ಜೋಯಿಸಗನಿತ್ತ ನಲ್ವೊಳ್ತಿನೊಳೋಲಗಮಿರ್ದು, ದೇವದಾಯಂಗೊಟ್ಟು ಅಱಂಗೆಯ್ದು, ನಂಬಿ ಸೇಱಿದರನುಂಬಳಿಯುಚಿತಂಗಳಿಂದೆ ಮನ್ನಿಸಿಯರಸುಗೆಯ್ಯುತ್ತಿರೆ—

ವೆಂಕಟಪತಿರಾಯಂ ತನ್ನಂ ಮಧುರೆಯ ಪುಯಿಲೊಳ್ ಪಗೆವರ್ಗೊಪ್ಪಿಸಿಯೆರಟ್ಟಿಗೆದು ಬಿಟ್ಟು ಪೋಗಿ ಪಿಂತೆಣಿಸದೆ ಬೇರಂಗೊಂಡು ಬಿಂಕದೊಳ್ ತನಗಂ ತನ್ನನೋಲಗಿಪ ದೊರೆಗಳ್ಗಂ ಬಸಮಾಗದೆ ಪಡಿಬರಿಸಿ ಬಲ್ಮೆಯೊಳಿರ್ಪ **ತಿರುಮಲೆರಾಜ**ನ ದೇಶಕೋಶಂಗಳಂ ಕೊಂಡು

ಅವನನೆಟ್ಟಿಬ್ದುದರ್ಕೆ ಪೆರ್ಕಳಿಸಿ, ಸೊರ್ಕಾನೆಗಳನುರ್ಕುಗುದುರೆಗಳನೊ ಳ್ಳುಡೆತೊಡವುಗಳಂ ಪಾವುಡಮಂ ಕೊಟ್ಟು ಮಂತ್ರಿಗಳೊಳ್ ಕಟ್ಟಾಳೆನಿಸಿದ **ಗಂಭೀರರಾಯುವಿರುಪಣ್ಣ**ನಂ ಕಳುಪೆ, ಅವನೆಯ್ತಂದು ತಂದುವನೊ ಪ್ಪಿಸೆ ಯುವಂ ಕೊಂಡವನಂ ಮನ್ನಿಸಿ ರಾಯುಂಗೆ ಪಡಿಪಾವುಡಮಂ ಕಟ್ಟಿಸಿ ಕಳುಪಿ ಸಂತಸದೊಳಿರ್ದಂ.

ಇತ್ತಲೀ **ಪದಿನಾಡ ನಂಜರಾಜಂ** ತನ್ನಂ ಕಂಡೋಲಗಿಪಾಲಂ ಬಾಡಿ ಕೊಳೆಯುಂ ಮೊದಲಾದ ಕೂಟದಾಳ ನೆಜಿವಿಯುಂ, ಎಳವಂ ದೂರ ಸತ್ಯಾಗಾಲದರಸರಪ್ಪ ತನ್ನೊಡವುಟ್ಟಿದರ ಪಡೆಯುಂ, ನೆರೆಯು ದೊರೆಗಳ ಪಡಿದಟಿಮುಂ, ತನ್ನ ಮೂಲಬಲಮುಂ, ತನಗೆ ಮಾಧುರೆಯುವ ರೀವ ಕಪ್ಪದ ಪಣದೊಳ್ ಕಟ್ಟಿದ ಕಾಲಾಳ್ಗಳ ಮೋಹರಮುಮುಂಟೆಂಬು ಬ್ಬಿನಿಂ **ರಾಜನೃಪ**ನೊಳ್ ತೋಂಟಿಗೊಳಲೆಂದು ಎಡದೊಜಿಕಿಯೆಂಬ ಗಡಿಗೋಂಟೆಯೊಳ್ ಕಟ್ಟಿರ್ದ ಮೇಘಪುಷ್ಪವೆಂಬ ತೇಜಿಯಂ ಕಳವಿ ನಿಂದೆ ಕೊಂಡೊಯ್ಯುದುಂ ;

ಅದಂ ಸೈರಿಸದೆ ರಾಜನೃಪಂ ಆತೇಜಿಗೆ ಅವನ ತಲೆಯುನೆ ಬೆಲೆ ಗೊಂಬೆನೆಂದು ಬಲದೊಡನೆ ನಡೆದು ಅವನ ತಾಯೂರೆಂಬ ಗಡಿ ಗೋಂಟೆಯಂ ವೇಢೈಸಿ ಮುತ್ತುವಿನಂ ;

ಅವಂ ಸಂವರಣೆಗೊಂಡು ಬರೆ, ದಾಜಿಯೊಳವನ ದಟಿಮುನಡ್ಡ ಗಟ್ಟಿ ಬೇಡರನಜಿಕಿಯುಟ್ಟಿಬೀರದೊಳಿದಿರ್ಚಿದ **ಹಱಿಗೆಯು ನಂಜುಂಡಂ, ಕೋರನಹಳ್ಳಿಯು ಕೊಂಡಂ** ಮೊದಲಾದ ಗಂಡುಗಲಿಗಳ ತಲೆಯಂ ಸೆಂಡಾಡಿಯಾ**ನಂಜರಾಜ**ನಂ ಕೈಸೆಜಿಕಿಗೊಂಡು ಕೈಗಾದು ಕಳುಪುವೆ ನೆಂದಿರ್ಪಿನಂ ; ಮೊನೆಯೊಳೋರ್ವಂ ಮುಂಚಿ ಮೋಹರದೊಳ್ ಕುಜುಪು ಗಾಣದಿರಿದು ಕೊರಲಂ ಕೊಜಿಕಿದು ತರ್ಪಿನಂ ;

ಅರಸನದಂ ಕಂಡು ಮಜುಗಿಯುವನಂ ಕೊಂಡಾಡಿಯಾಪನ್ದಲೆ ಯುಂ ಪೊನ್ದಳಿಗೆಯೊಳಿಟ್ಟು ಪೊಂಬಟ್ಟೆಯುಂ ಪೊದಿಸಿಯುಂದಣದೊಳಿರಿಸಿ

ಯುವನೂರ್ಗೆ ಕಳುಪಿಯುವನ ಧನಕನಕವಸ್ತುವಾಹನಾದಿಗಳಂ ಸೂಱೆ ಗೊಂಡಾನಾಡನನಿತುವಂ ಬಸಂಗೆಯ್ದವನ ಕಂಡೋಲಗಿಪರನಾಳ್ದೊಂ ಡು ಬೀರರೊಳ್ಬೀರನೆನಿಸಿಯೆಣ್ಬತ್ತುಂ ಬರಿಸಂ ಧರ್ಮದಿಂ ಧರೆಯಂ ಪಾಲಿಸಿ ಬೞಿಲ್ದು ಯದುಗಿರಿನಾರಾಯಣನಡಿದಾವರೆಯ ನೆೞಲೊಳಾ ಬೞಲ್ಕೆಗಳೆಯಲೆಳಸಿಯನುಜರಂ ಕರೆದು—ಎಲೆ ಬೆಟ್ಟದಯ್ಯ ದೇವ ರಾಜರಿರಾ! ನೀವಿರ್ವರುಮೆನ್ನಂ ತಂದೆಗೆತ್ತದೞಂದಾನುಮೆನ್ನ ಕಂದ ಗೆತ್ತು ಕಿಱಿಯತಮ್ಮಂ ಚಿನ್ನರಾಜಂ, ನರಸರಾಜಂ ಮೊದಲಾದ ಮೂವರಣುಗರುಂ ನಾರಾಯಣನ ಚರಣಾರವಿಂದದೊಳಡಂಗಿಯೆನ್ನಂ ತೊಱೆದುದರ್ಕೆ ಮಱುಗದೆ, ಮನಂಗುಂದದಿರ್ದೆಂ. ಇನ್ನೆವರಂ ಪೊತ್ತಿ ರ್ದರಸುತನದ ಬಲ್ಪೊಱೆಯನಿೞಿಪುವೆಂ. ನೀವಿಂದಂ ಪೊತ್ತೆನ್ನಂ ಮನ್ನಿ ಸಿ ತಪಕ್ಕೆ ಕಳುಪುವುದೆಂದಾಣತಿಗುಡುವುದುಂ; ಅವರಿರ್ವರುಂ ಕಡು ಮಱುಕದಿಂ ಕಣ್ಬನಿಗಱೆಯುತ್ತೆ—ಜೀಯಾ! ನೇಸಱುೞಿದು ಬಿಸುಗ ದಿರ್ಗಳಿರ್ಕುಮೆ? ಬಿಚ್ಚಯಂ ವರ್ಜಿಸಿ ಬಿನ್ನಣಂಗಳ್ ಬಳೆಗುಮೆ? ಬಿಂಬಮಂ ಬಿಟ್ಟು ಪಡಿನೆೞಲ್ ನೆಗಳ್ಗುಮೆ? ದೇವರಂ ಬಿಟ್ಟಾವಿಂ ರ್ಪೆವೆ? ಈ ಮಾತಂತಿರ್ಕೆ. ದೇವರ ಕಿಱಿಯಣುಗರಿಮ್ಮಡಿರಾಜರಸಂ ಗಾದೊಡಂ ನರಸರಾಜನ ಬಸಿಱಬೞ್ದಂದ ಮೊಮ್ಮಂಗೆ **ಚಾಮರಾಜರ ಸಂ**ಗಾದೊಡಂ ಪಟ್ಟಂಗಟ್ಟಿಯಾಂ ಮೂವರುಂ ಪರಮಪುರುಷಚರಣ ಯುಗಳಧ್ಯಾನಾರ್ಚನೆಪ್ರಣಾಮಾದಿತತ್ಪರರಾಗಿ ಪರಮಪದವಿಯಂ ಪಡೆ ವೆವೆಂಬುದುಂ, ಅದರ್ಕೆ ಸಮ್ಮತಿಸಿ—ಆದೊಡೀನರಸರಾಜನ ಕುವರಂಗೆ **ಚಾಮರಾಜಂ**ಗರಸುವಟ್ಟಂಗಟ್ಟಿಯೆನ್ನ ಕುವರಂಗಂ ನಿಮ್ಮ ಕುವರರ್ಗಂ ಬೇಱೆವೇಱುಂಬಳಿಗಳನಮರಿಸಿಯಾಂ ಬೞಿಕೆ ಪರಮಪದಸಾಮ್ರಾಜ್ಯಮಂ ಸಾರ್ವೆವು—ಎಂದು, **ಚಾಮರಾಜಂ**ಗೆ ರಾಜ್ಯಾಭಿಷೇಕಂಗೆಯ್ದು, ತನ್ನ ಕುವರಂಗೆ ಪಡುವಣ ಡಣಾಯಕನ ಕೋಂಟೆಯಂ, ಬೆಟ್ಟದ ಚಾಮರಾ ಜರಸನ ಕುವರರ್ಗೆ ರಂಗಸಮುದ್ರ ನಳ್ಳೂರ್ ವಿಜಯಾಪುರಂಗಳಂ,

**ದೇವರಾಜರಸನ** ಕುವರರ್ಗೆ ಆಱುಕೆಱುಯೆಲೆಯೂರ್ ಮಂಗಲಂಗಳ ನಿತ್ತು, ಅವರನಿಬರುಮನೆನ್ನಂ ಕಂಡಂತೆ ಕಾಣ್ಬುದೆಂದು ಮೊಮ್ಮಂಗೆ ಬೆಸಸಿ, ಪುಯಿಲನೆಸಗುವಲ್ಲಿಯುಂ ಪೊಡವಿಯುಂ ಪೊರೆವಲ್ಲಿಯುಂ ಪುರು ಳ್ಗೊಂಬಲ್ಲಿಯುಂ ಪುಸಿವುಗದೆ ಧರ್ಮಮನಾರಯ್ದು ನಡೆವುದೆಂದು ಬುದ್ಧಿ ವೇೞ್ದು ಮೂವರುಂ ಅಂಬರೀಷರುಕ್ಮಾಂಗದಾದಿಪರಮಭಾಗವತರಂ ದೊರೆಗೊಂಡು ಪರಮಾನಂದದೊಳಿರ್ಪಿನಂ ;

ಒಂದು ದಿವಸಂ ರಾಜನೃಪನ ಮೆಯ್ಗೆನಿಸಾಯಸಂದೋಱೆ ಕಡು ಮುಪ್ಪಾದುದಱಿಂ ಕಟಿವೂವಿನ ಕಾವುಗಳೆದಂತುಗ್ಗಡಿಪ ನಾರಾಯಣನ ನಾಮಾಕ್ಷರದೊಡನೆ ಅಸು ಪೊಱಮಟ್ಟು ಪೋಪುದುಮಾದಿವಸದೊಳಾ ಜಾವದೊಳಾಗಳಿಗೆಯೊಳಾಕ್ಷಣದೊಳ್ ಮುನ್ನೆಯ್ತರ್ಪ ಪರಿಯೊಳೀಯದು ಗಿರಿನಾರಾಯಣಚರಣಾರವಿಂದದ್ವಂದ್ವಸನ್ನಿಧಾನಮಂ ಸಾರ್ವುದುಂ ; ಅಲ್ಲಿ ದಿವ್ಯಪ್ರಬಂಧಾನುಸಂಧಾನಂಗೆಯ್ಯುತಿರ್ಪ ಶ್ರೀವೈಷ್ಣವರನಿಬರುಂ ಎೞ್ದಾಶೀರ್ವಾದಿಸೆ ಅವರ್ಗೆಱಗಿ ಗರ್ಭಗೃಹಮಂ ಪೊಕ್ಕು ತಿರುನಾರಾ ಯಣನಡಿದಾವರೆಯೊಳ್ ಮುಡಿಯಂ ಸಾರ್ಚಿ ಮೆಯ್ಮಱಸಿದಂ. ಅದಂ ಕಂಡಂದು ಮೊದಲಲ್ಲಿರ್ಪರನಿಬರುಂ ಪರಾಂಕುಶ ಪರಕಾಲಾದಿ ದಿವ್ಯಯೋಗಿ ಗಳ ಗಣನೆಯೊಳೀತನಂ ಪುದುಂಗೊಳಿಸಿಯೆಣಿಸುವರ್.

ಇತ್ತಲ್ ಪಟ್ಟಣದೊಳ್ **ಬೆಟ್ಟದ ಚಾಮರಾಜ ದೇವರಾಜರಸ** ರಿರ್ವರುಂ ಮೊಮ್ಮನನುಮತದಿಂದಣ್ಣಂಗೌರ್ಧ್ವದೈಹಿಕಸಂಸ್ಕಾರಮಂ ನಿರ್ವ ರ್ತಿಸಿ ತಂತಮ್ಮಣುಗರನಾ **ಚಾಮರಾಜನ** ಕೆಯ್ಯೆಡೆಗೊಟ್ಟು ಯದುಗಿರಿ ವೇಂಕಟಾಚಲ ಕಾಂಚಿ ಕುಂಭಘೋಣ ಶ್ರೀರಂಗ ರಾಮಸೇತುಗಳ್ ಮೊದಲಾದ ಪುಣ್ಯಕ್ಷೇತ್ರಂಗಳ ಯಾತ್ರೆಗೆಯ್ದಿದರ್.

---

# ಚಾಮರಾಜನ ಚರಿತಂ

ಆ ಚಾಮರಾಜನೆಳವರೆಯುದವನಾದೊಡಂ ಮೞಿಸಿಂಗದಂತೆಯುಂ, ಪೊಸನೇಸಱಂತೆಯುಂ, ನೃಸಿಂಹನಂತೆಯುಂ, ತ್ರಿವಿಕ್ರಮನಂತೆಯುಂ ಬೀರಮುಂ ತೇಜಮುಂ ಶೌರ್‍ಯಮುಂ ಪರಾಕ್ರಮಮುಂ ಮೆಯ್ಗೊಂಡು, ಗಂಡುವಿಡಾಱ ದಿಗ್ಜಯಂಗೆಯ್ಯಲುಜ್ಜುಗಿಸಿ ದೞಮಂ ದೞನಾಯೊಡನೆ ಕಳುಪಿ, ಮೂಡಲ್-ತಳಕಾಡವರ ಮಳವಳ್ಳಿಯಂ ವೇಢೈಸಿ ಮುತ್ತಿ ಸುತ್ತುವೇಲಿಯಂ ಬಲಿದು ತಳಿಯನೊತ್ತರಿಸಿ ಪಡಿದೞಮಾಗಿ ಬಂದ **ಜಗದೇವರಾಯನ** ಪಡೆನೋಡಿಸಿಯೊರುಗರ್ಗೆ ಕವಲ್ಗಂಬುಗೆಯನಿತ್ತು ಪೊಱಮಡಿಸಿಯುದಂ ಬಸಂಗೆಯ್ದು ಒಡನೆ ತಳಕಾಡಂ ತನ್ನದೆನಿಸಿ ಅತ್ತಣಿಂ ದಾಗ್ನೇಯದೊಳ್ ಕಣುವೆಯ ಬೆಟ್ಟಮನಿೞಿದು **ಘಟ್ಟಮುದನಾರಿಯಂ** ಕುಟ್ಟಿಮಟ್ಟಿಟ್ಟಮಂ ಕಾಣ್ಗೆಗೊಟ್ಟೊಡವೆಪೊಂಗಳೊಡನೆ ಚೆಂಗೊಡೆಯೆಂಬಾನೆಯನಂಗೀಕರಿಸಿ. ಪಡುವಲ್—ಕೆಳಲೆಯ ನಾಡ ಪಿರಿಯಪಟ್ಟಣದ ದೊರೆಯ ತಟ್ಟನಱಿಯಟ್ಟಿ ಅವಂಗೆ ನೆರನಾಗಿ ಬಂದ ಕೆಳದಿಯ ಸಿಂಗಳರಾಯನ ಮೂಗನರಿದು ಭಂಗಿಸಿ, ಬೋಳಮಲ್ಲನೆಂಬಾನೆಯೊಡನೆ ತೊಡವು ಪಾವುಡಂಗಳಂ ಕೊಂಡು, ಅವನಂ ಮನ್ನಿಸಿಯತ್ತಣಿಂ, ಬಡಗಲ್—ನರಸಿಂಹಪುರದರಸನಂ ಧುರದೊಳ್ ಪರಿಭವಿಸಿಯವಂ ತಂದಿತ್ತ ಕನಕಭೂಷಣದೊಡನೆ ಕನಕವಸಂತನೆಂಬಾನೆಯಂ ಸ್ವೀಕರಿಸಿ, ಬೞಿಕ್ಕೆ ಬೇಲೂರವನೊಳಿಲ್ಲೆವೊಲದತ್ತಣಿಂ ಬೇರಂಬಳೆದವಂ ಬಳೆಯಿಸಿದ ದೞಮೆಲ್ಲಮಂ ಚೋಳಿಯನ ಪಳ್ಳಿಯ ಬೞಿಯೊಳೊರ್ವ್ಗ, ಆನೆಯ ಕೆಱೆಯ ಸನಿಯದೊಳೊರ್ಕೆ, ಎಲೆಯೂರ ಪೊಲದೊಳೊರ್ಕೆ, ಕೊಳುಗುಳದೊಳೊಕ್ಕಲಿಕ್ಕಿ ಸೊರ್ಕನುಡಿದು, ಮಿಕ್ಕವರ ಮೂಗನರಿದು ಮೊಗಗೆಡಿಸಿ, ಕೊಳತೂರಂ ಮುತ್ತಿ ಲಗ್ಗೆಯೇಱ ಕೞಿಕ್ಕೊಲೆವಿಟ್ಟು ಕಡಿದೊಟ್ಟಿದ ಕಡಿವೆಟ್ಟನೊಳ್ ಪಂದಲೆಗಲ್ಗಳಂ ತಂದವಱಿೞೊಳ್ ಮೂನೆಲೆಯ ಜಗಲಿಯಂ, ಕಡಿದು ಕೆಡಪಿ ದಾನೆಗಳ ನೀಡುಗೋಡುಗಳಿಂ ಕಂಭಂಗಳಂ[ಗಂಡುಗಲಿಗಳ]ಗುಂಡುಗೋವಿ ಸರಗೋವಿಗಳಿಂ ಬೋದಿಗೆತೊಲೆಗಳಂ, ಕೈಸೆಱೆಸಿಲ್ಕಿದ ಪದಿನಾಱು ಸಾಸಿ

ರಾಳ್ಗಳ ಕೆಯ್ಯೊಳೀಟ್ಟಿ ಕುನ್ತಂಗಳಿಂ ಜಂತೆಗಳಂ, ಪ್ರಾಸಪಟ್ಟಸಂಗಳಿಂ ಪಾಸುವಲಗೆಗಳಂ, ವಂಕಿಗಳಿಂ ಲೋವೆಗಳಂ, ಕಣೆಗಳಿಂ ಪಂಜರಂಗಳಂ, ಬಿಲ್ಲಿಱುವುಗಳಿಂ ಬಿಗಿನೇಣ್ಗಳಂ, ಪಲತೆಱದಲಗುಗಳಿಂ ಮೇಲ್ವೊದಕೆಗಳನ ಳವಡಿಸಿ, ಬೀರಕ್ಕೆ ಬೀಡಾರಮುಂ, ರೌದ್ರಕ್ಕೆ ಭದ್ರಶಾಲೆಯುಂ, ಸಾಸಕ್ಕೆ ವಾಸಗೃಹಮುಂ, ಗರುವಿಕೆಗರಮನೆಯುಂ, ಗರ್ವಕ್ಕೆ ಗರುಡಿಯುನೊಡರ್ಚುವ ವಂತೊಂದಲಗುವನೆಯುನನುಗೆಯ್ದು ಅದಂ ಗೆಲ್ಲವೆಣ್ ಮದುವೆಯ ಪಸೆಜಗತಿಯುನೇಱುವಂತೆ ಸಂತಸದೊಳೇಱಿ ಪೇರೋಲಗಮುನಿತ್ತು, ಅವ ರೊಳ್ ಬಲಿದ ಬೇರಮುಂ ತೀರ್ಚಿ, ಬಟೀಕ್ಕೆ ಪೊಸಕೋಂಟೆಯುಂ ಮುತ್ತಿ ಮೂಗುಬ್ಬಸಂಗೆಯ್ವಿನಮಲ್ಲಿಯ ದೊರೆ ನೆವಂಗೊಂಡು ಬಂದ **ಜಗದೇವ ರಾಯ**ನ ಒಡವುಟ್ಟಿದನಾ**ದಂಕುಶರಾಯ**ನನಱಿಯಟ್ಟಿ ಅವನ ತಟ್ಟಿ ನೊಳ್ ಭೋಜರಾಜಚೊಕ್ಕಳಿಕವೆಸರೆರಡಾನೆಗಳುಮಂ ಪಲಬಿರುದುಗುಱು ಪುಗಳುಮಂ ಕೊಂಡು ಕಳುಪಿಯಾಕೋಂಟೆಯುಂ ಬಸಂಗೆಯ್ದು, ಕೆಲವುಂ ದಿನದಮೇಲೆ ಮಂ **ಜಗದೇವರಾಯುಂ** ಪೊಸಕೋಂಟೆಯುಂ ಕೊಂಬೆಡೆ ಯೊಳಡನಾಯ್ದುದಂ ನೆನೆದವನ ಚೆನ್ನಪಟ್ಟಣ ನಾಗಮಂಗಲಂಗಳೆಂಬ ತಾಯ್ಗೋಂಟೆಗಳಂ ಕಟಿಬ್ಗಲೆಯೊಳ್ಕೊಂಡು ಪೊಱಮಡಿಸಿಯುದರ್ಕೆ ಸಲ್ವ ಬೆಳ್ಳೂರಂ ಮುತ್ತಿ ಮುನ್ನಂ ನೆರೆಯ ಕಿಱುದೊರೆಗಳಂ ಗೆಲ್ದುಬ್ಬುಗೊಬ್ಬಿ ನಿಂ ಮೆಯ್ಮಱೆತು ಮೇರೆಯುಟೀದು ಗಳಪುವ ಚಿಕನಾಯಕನ ಪಳ್ಳಿಯ ದಟಿನಾಯಾದ **ಪರಮರಾವುತ**ನನಿಱಿದು ಕೆಡಪಿ ಕೊರಲನರಿದು ಮೂಗಂ ಕೊಯ್ದು ಅವನ ಬಲಮುಂ ಬಱುಗೆಯ್ವಿನಮುದರ್ಕೆ ಬಿಗುರ್ತ ವನ ದೊರೆಯಿತ್ತ ವಸ್ತ್ರಭೂಷಣಂಗಳೊಡನೆ ರಾಮಲಿಂಗವೆಂಬಾನೆಯುಂ ಕೊಂಡು, ಇಂತೆಣ್ದೆಸೆಗಳಂ ಗೆಲ್ದು, ಜಸಮುಂ ಪಸರಿಸಿ, ಮತ್ತಂ ಧಿತ್ರ ಭಾವದೊಳ್ ಪತ್ತಿದಿರ್ಕೆಱಿ ಬಾಣವರ ಬಸವಪಟ್ಟಣಂಗಳ್ ಮೊದ ಲಾದ ಪೊಬಲಾಣ್ಮೆರ್ಗೆ ನಲ್ಮೆಗೆಯ್ದು, ನಲ್ಮೆಯಿಂ ಕನ್ನಡನಾಡೆಲ್ಲಮಂ ಭಸಕ್ಕೆ ತಂದು, ಅಗರದೇಗುಲಂಗಳಂ ಪೊರೆಯುತ್ತುಂ, ಪೊಸತಾದುವನೆ

ಸಗುತ್ತುಂ ಸಂತಸಮಿರುತ್ತಾನೆತ್ತೀಜಿಗಳನೇಱು, ವೈಯಾಳಿಯ ವಿಲಾಸದೊಳೊರ್ಮೆ, ಕೈದುವಿಡಿದು ಗರುಡಿಗೆಯ್ದುದ ಕೈಮೆಯೊಳೊರ್ಮೆ, ಬಿಲ್ಗಣೆಗೊಂಡು ಗುಱಿಯಿಸುವ ಕೌಶಲದೊಳೊರ್ಮೆ, ವೀಣೆದಳೆದು ಬಣ್ಣವಾಡುಗಳಂ ಬಾಜಿಪೋಜೆಯೊಳೊರ್ಮೆ, ಸುಣ್ಚರವೆತ್ತಿ ಪಾಡುವ ಬೆಡಗುದೊಳೊರ್ಮೆ, ಅಂತವುರದ ಕಾಂತೆಯರ ನೃತ್ತಾವಲೋಕನದೊಳೊರ್ಮೆ, ಕಾವ್ಯನಾಟಕಾಲಂಕಾರಸಾರಸರ್ವಸ್ವರಸಾಸ್ವಾದನದೊಳೊರ್ಮೆ, ಪುರಾಣೇತಿಹಾಸಾದಿ ಪುಣ್ಯಕಥಾಶ್ರವಣಾನುರಾಗದೊಳೊರ್ಮೆ, ದೇವಯಾತ್ರೋತ್ಸವಸಂದರ್ಶನಾನಂದದೊಳೊರ್ಮೆ, ಉಳ್ಳ ಕಾಲಮೆಲ್ಲಮನಿಂತೊಳ್ಗೆಯ್ದುದೊಳ್ ಕಳೆದು ಅಱಿಯುದ ಬೆಳ್ಜಸಮೆಯ್ಯಂ ಇಳೆಯೊಳ್ ನೆಲೆಗೊಳಿಸಿ ಬರ್ದಿಲನಾಡೊಳ್ ಬಾಳ್ದಂ.

---

## ಇಮ್ಮಡಿ ರಾಜರಸನ ಚರಿತಂ

ಬೞಿಕ್ಕೆ **ರಾಜರಸ**ಕುವರನಾ**ದಿಮ್ಮಡಿರಾಜರಸಂ** ಅರಸುಗೆಯ್ಯುತ್ತುಮುಳವಿನೊಳಮಾರ್ಪಿನೊಳಂ ಸತ್ತಿಯೊಳಂ ಸಾಸದೊಳಂ ಬೀರದೊಳಂ ಬಿನಯದೊಳಂ ನನ್ನಿಯೊಳಂ ನಲ್ಮೆಯೊಳಂ ಜಸದೊಳಂ ಜಾಣ್ಮೆಯೊಳಂ ಬಿಜ್ಜೆಯೊಳಂ ಬಿನ್ನಣದೊಳಂ ಎಱಕದೊಳಂ ಏೞ್ಗೆಯೊಳಂ ಒಜೆಯೊಳಂ ಉಜ್ಜುಗದೊಳಂ ಧೈರ್ಯದೊಳಂ ಧರ್ಮದೊಳಂ ವಿನಯದೊಳಂ ವಿವೇಕದೊಳಂ ತಂದೆಯಿಂದೆಯುಂ ಇರ್ಮಡಿಸಿ, ತನ್ನ ಪೆಸರನನ್ವರ್ಥಂಗೆಯ್ದೆಣ್ದೆಸೆಗಳಂ ಜಯಿಸಿ, ಪಲದೊರೆಗಳಿಂ ಪಲವುಂ ಧನಕನಕವಸ್ತುವಾಹನಂಗಳಂ ಕಪ್ಪಂಗೊಂಡು, ಪೊರ್ದಿದರಂ ಪೊರೆದು, ಎಱಿವಗಿತ್ತು, ಪರಮಪುರುಷನ ಚರಣಾರವಿಂದದ್ವಂದ್ವಸಂದರ್ಶನಶ್ರವಣಕೀರ್ತನಾದಿ ಭಕ್ತಿರಸಪರಿಪಾಕಭೇದಮಂ ನಿಚ್ಚಣಿಗೆಗೆಯ್ದು ಪರಮಪದಮನೇಱಿದಂ.

---

# ಕಂಠೀರವ ನರಸರಾಜ ಚರಿತಂ

ಬೞಿಕ್ಕೆ **ಬೆಟ್ಟದ ಚಾಮರಾಜರಸನ** ಕುವರಂ ವೈರಿರಾಜಗಜ ಕಂಠೀರವಂ **ಕಂಠೀರವ ನರಸರಾಜಂ** ರಾಜ್ಯಾಭಿಷೇಕಮುಂ ತಾಳ್ದು ಪಟ್ಟ ವಣೆಯುಂ ಪಗೆವರ ತಲೆಯೊಡನೆ ಮೆಟ್ಟಿ ಕಟ್ಟಾಳ್ವೆರ್ಸನೋಳಿರ್ಪಿನಂ—

ಬಸವಪಟ್ಟಣದ **ಕೆಂಗೆಹನುಮಪ್ಪನಾಯಕ**ನಿರ್ಕೆಱೆಯ **ವೀರ ಭದ್ರನಾಯಕನ** ಮೇಗಣ ಬೇರದಿಂ ಯವನಕುಲದ ವಿಜಯಾಪುರದ **ಸುರಿತಾಣ ಮುಹಮ್ಮದ ಪಾದುಶಾಹ**ನೆಡೆಗೆ ನಡೆದವನಡಿವಿಡಿದು **ರಣ ದುಲಖಾನ**ನೆಂಬ ಸೇನಾಪತಿಯೊಡನೆ ನಾಲ್ವತ್ತುಂ ಸಾಸಿರ ವಾರುವಂಗಳು ಮುಂ ನಾಲ್ವತ್ತಾನೆಯುಮುಂ ಲಕ್ಕಪಾಯಿದಱಿಮುಮುನೊಡಗೊಂಡು ಬಂ ದೊಂದೆ ಸೂೞಿಱಿಳಿರ್ಕೆಱೆಯನೊಕ್ಕಲಿಕ್ಕಿ ದಕ್ಕುಗೊಳಲೊಡಮಾತುರುಕ ಪಡೆವಳಂ ಕೊರ್ಬಿಯುರ್ಬಿ ಕನ್ನಡನಾಡೊಳ್ ತನ್ನ ಪೆರ್ವಡೆಗಿದಿರಪ್ಪ ರೊರ್ವರುಮಿಲ್ಲೆಂದು ಮುಂತಣ್ಗೆ ನಡೆದು ಸೀರೆಯದ ದೊರೆಯುಂ ಸೆಱೆ ಗೊಂಡು ಪಾಯ್ದು ತುಱುಗೆಱೆಯವನಂ ತೊತ್ತೞಿಂದುೞಿದು, ಬೆಂಗ ಳೂರವನಂ ಭಂಗಂಬಡಿಸಿ, ಅವರವರ ದೇಶಕೋಶಂಗಳಂ ಬಸಂಗೆಯ್ದು, ಬೆಱೆತು, ತಱುವಾಯೊಳ್ **ಕೆಂಗೆಹನುಮಂ** ತಕ್ಕುದಲ್ತೆಂದು ನುಡಿದು ತಡೆ ದೊಡವೊಡಂಬಡದೆ ಕಡುಪಿನೊಳ್ ಮಟ್ಟುಮಿಱಿ ಪಟ್ಟಣಮುಂ ಬಳಸಿ ಮೇಢೈಸಿ ಕಟ್ಟಳವಿನಿಂದಿಟ್ಟಡಿಯುಂ ಪಿಂದೆಗೆಯದೆ ಚಲಂದೊಟ್ಟು ನಡೆ ದಿಟ್ಟು ಕೆಡಪಿದ ಪೆಣದೊಟ್ಟಿಲೊಳಗೞಿಂ ಪೊಱ್ದು ಪಟ್ಟಿಪಗಲೆ ಕೞಿಲ್ಗೆ ಲೆಗೆ ಬಗೆಯಿಟ್ಟು ಕಟ್ಟುಱಿದೊಳಿಟ್ಟುೞಿಸಿ ಸುರಿದ ಕೈದುಮಱಿಗಳವೞಿಯದೆ ಕೋಂಟೆಯುಂ ಮುಟ್ಟಿ ನಿಟ್ಟೇಣಿಗಳನೇಱಿ ತಲೆ ಪಱಿದು ಪಡಲ್ವಟ್ಟೊಡಂ ನಿಟ್ಟೋಟದಿಂದಟ್ಟಳೆವರೆಗಮಡರ್ದಟ್ಟೆಗಳನಿಟ್ಟಿಗಳಿಂದಿಱಿದಿಱಿದವನ ತಲೆ ಗೇಱಿದ ಸೊರ್ಕನೊಡನಿೞಿಯ ಕೆಡಪಲೊಡಂ ; ಅವಂ ಕೆಟ್ಟುಮುಱಿದು ಬಾಯ್ಬಿಟ್ಟು **ಕೆಂಗೆಹನುಮನ** ಬಸಿಱೊಳ್ ತಲೆಯಿಟ್ಟು ನುಡಿದಂ :—

“ಎಲೆ ನಾಯಕ! ನೀನೆಂದ ನುಡಿ ನಿಜವಾದುದು. ಆಂ ವಿಜಯಾ ಪುರಮಂ ಪೊಱಮಟ್ಟಂದುಮೊದಲಿಂದುವರೆಗಂ, ಮತ್ತಮೇಂ, ಪುಟ್ಟಿ ದಂದುಮೊದಲಿಂದುವರೆಗಂ ಈಪರಿಯ ಬೀರನಂ ಕಂಡುದಿಲ್ಲ. ಅಕಟ ಕಟಾ! ಮುನ್ನೀತೆಱದ ಬಲ್ಲಿದನೆಂದು ಬಗೆಯದೆ ಬಲನೆಲ್ಲಮಂ ಬಲಿ ಯಿತ್ತೆಂ; ಪೆತ್ತ ಗೆಲ್ಲಮಂ ಪೆಱಸಾರ್ಚಿದೆಂ; ಪೊತ್ತಜಸಮಂ ಪುಯ್ಯೆ ನಿಸಿದೆಂ; ಪತ್ತಿದೇೞ್ಗೆಯಂ ಬಯಲ್ಗೆಯ್ದೆಂ; ನಿನ್ನ ನುಡಿಯಂ ನೀೞ್ದರಿ ಸಿದೆಂ; ಭಿನ್ನತಂತ್ರದೊಳ್ ಬೀದಿವರಿದೆಂ; ಮುಂತಣೆರವಿನೊಳ್ಮೊಸ ವೋದೆಂ; ಪಿಂತಣೋಜೆಯಂ ಬೀೞ್ಕೊಡಿಸಿದೆಂ; ಈಕಡಲುಡಿಗೆಯ ಪೊಡ ವಿಯೆಡೆಯೊಳಿಡಿದ ಕೂರ್ದೋರೆಗಳೊಳಿನ್ನೆವರೆಗಂ ಎನ್ನ ಪೆಸರ್ಗೇಳ್ದು ಬಸವೞಿಯದರುಂ ಪೞಯಿಗೆಗಂಡಳವುಗಳೆಯದರುಂ ಪೌಜಂ ಕಂಡು ತೇಜಂಗುಂದದವರುಂ ಕೈದುವೆಳಗಿಂಗೆ ಕಣ್ಗೆಡದವರುಮಿಲ್ಲ. ಅಂತಿರ್ಪ ಕೂರ್ಪನೀಪಟ್ಟಣದೊಳ್ ಪೊಟ್ಟುಗೆಯ್ದೆಂ. ಎನ್ನ ಮನ್ನಣೆಯ ತುೞಿ ಲಾಳ್ಗಳೀಲಗ್ಗೆಯೊಳೀರಾಱು ಸಾಸಿರ್ವರೞಿದರ್. ಉೞಿದರುಮೂರೂರಿ ಗರಿರುಳೊಳ್ ಪೊಱಮಟ್ಟು ಎಸಗುವಟ್ಟುಳಿಯಿಂ ಕಣ್ಗೆಟ್ಟು ಕಟ್ಟೞಿದು ಇಂದು ನಾಳಿನೊಳಿನ್ನುಂ ಬಿಟ್ಟುಪೋಪರ್; ಅವರೇಗೆಯ್ವರ್? ಕಳ್ವ ನಾರುವಂಗಳ್ಗಿವಿಾಟ್ವ ಕೈದುಗಳ್ಗಂ ಕೊಯ್ವ ತಲೆಗಳ್ಗಂ ಕೊಱೆವ ಮೂ ಗುಗಳ್ಗಂ ಗಣನೆಯಿಲ್ಲ. ಇಟ್ಟೆಡೆಗೆಯ್ದುದಱಿಂ ಮೂಗುಬ್ಬಸಮಾ ದುದು. ಬಿಟ್ಟು ಪೋಪೊಡಂ ಬಟ್ಟೆಯಿಲ್ಲ. ಕೆಟ್ಟಕಜ್ಜದೊಳ್ ಕೈಗೊಟ್ಟು ಕಾಪಿಟ್ಟೆಮ್ಮಂ ಕಡೆನಾಯಿಸವೇೞ್ಕುಂ. ಅದರ್ಕೀಪಟ್ಟಣದವನ ಕಡೆಗಡಿ ವರೆಗಮೆಮ್ಮನಾಡುಗರ್ ಕಾಣದಂತೆ ಅವನ ರಾಯಸಮಂ ತೆಗೆದಿತ್ತೊ ಡಾಂ ಪದುಳದೊಳ್ ಪೋಪೆಂ” ಎಂದನುವೇೞ್ವುದುಮವನುಮಂತೆಗೆ ಯ್ದಂ. ಬೞಿಕ್ಕಾತುರುಕಪಡೆವಳಂ ಕಪ್ಪಿನಿಂದೆೞ್ದ ಕಾಡಾನೆಯಂತೆಯುಂ ಪುಲಿವಾಯ್ದುೞಿದ ಪುಲ್ಲೆಯಂತೆಯುಂ, ತಡೆಯೊಡೆದ ಪಾವಿನಂತೆಯುಂ, ಅಂಟುಗೞಿದ ಪಕ್ಕಿಗಳಂತೆಯುಂ, ಬಲೆಯಿಂ ತಪ್ಪಿದ ಮೊಲದಂತೆಯುಂ

ಬಾಲಂ ಪಜ್ಜಿದ ಪಿಳ್ಳಿನಂತೆಯುಂ, ಕಟ್ಟುಸಡಿಲ್ದ ಕಳ್ಳನಂತೆಯುಂ, ನಿಂದಲ್ಲಿ ನಿಲ್ಲದೆ ಪಿಂದಿರುಗಿ ನೋಡದೆ ಒಡಿ ತನ್ನ ಬೀಡಂ ಸಾರ್ದಂ. ಅಂದು ಮೊದಲ್ ತುರುಕರೀ**ಕಂಠೀರವನೃಪನ** ಪೆಸರ್ಗೊಳ್ಳಲುಮಾದೆಸೆಗೆ ಮೊಗಮಾಗಲುಮಣ್ಮದೆ ಹಮ್ಮುಗಿುದು ಹುದುಗಿದರ್.

ಈತನುಮಾ ಯವನಪಡೆಯಂ ಜಯಿಸಿ, ಕನ್ನಡನಾಡೊಳ್ ನೆಗಲ್ತೆವೆತ್ತು, ದೆಸೆಗಳಂ ಗೆಲಲುಜ್ಜುಗಿಸಿ ಮೂಡಲ್ ನಡೆದು, ವಿಜಯಾಪುರದ ಸೇನಾನಿಯೆನಿಸಿದ **ಖಾನಖಾನನ** ಸೇನೆಯನೆಬ್ಬಿಟ್ಟಿ, ರಾಯಗೋಂಟೆ ರತ್ನಗಿರಿ ರಾಮಗಿರಿ ವೀರಭದ್ರದುರ್ಗ ಕೆಂಗೇಱಿ ಪೆನ್ನಗರಂಗಳಂ ಕಟ್ಟಿ, ತೆಂಕಲ್-ಮಧುರೆಯ **ತಿರುಮಲೆನಾಯಕ**ನನೀಕಮುಂ ಧುರದೊಳ್ ನೀಟ್ಟಿರಿಸಿ, ಕೊಳಿಯ ಸಾಂಬಳ್ಳಿ ಸತ್ಯಮಂಗಲ ಡಣಾಯಕನ ಕೋಂಟೆಗಳಂ ಕೊಂಡು, ಪಡುವಲ್—ಕೆಳಲೆಯ ನಾಡ ಪಿರಿಯಪಟ್ಟಣಮಂ ಕಟಿಖ್ಗಲೆಯೊಳೀಟ್ಟು, ಸರ್ವಸ್ವದೊಡನಾ**ಮಲ್ಲರಾಜನಂ** ಕೈಸೆಱಿವಿಡಿದು, ಬಡಗಲ್—**ಮಲ್ಲುಕನ** ದಟಿಮಂ ಮಟ್ಟಿುಗೊಳಿಸಿ, ತುಱುಗೆಱಿ ಕಡಬ ಕಲ್ಲೂರ್ ಹೆಬ್ಬೂರ್ ಮೊದಲಾದ ಪಲವುಂ ಪೊಟಲ್ಗಳಂ ಸೆಳೆದು ಪೆರ್ಮೆವೆತ್ತು, ಧರ್ಮದೊಳಿಳೆಯಂ ಪಾಲಿಸುತ್ತೆ, ನಿತ್ಯಸುಖಮನೆಳಸಿ, ತತ್ತ್ವಮನಾರಯ್ದು, ಪುರುಷೋತ್ತಮನ ಭಕ್ತಿಯೊಳಲ್ಲದೆ ಮುಕ್ತಿಯನುಗೊಳ್ಳದೆಂದು ನಿಶ್ಚಯಿಸಿ, ಅವತರಿಸುತ್ತುಮೆ ಆರ್ತರಕ್ಷೆಯಂ ಧೂರ್ತಶಿಕ್ಷೆಯಂ ಕ್ಷಣವಿಳಂಬಮಂ ಸೈರಿಸದೆಸಗಿದ ನೃಸಿಂಹನ ದಿವ್ಯಮೂರ್ತಿಯಂ ನೆನೆದು ಜಾನಿಸಿ ಕೂರ್ತು ಕೊಂಡಾಡಿ ಅಡಿಗೆಜಗಿಯಾಳ್ಗಿಯ್ದು ತಣಿದಾನಂದರಸದೊಳ್ಗಾಂದಿರ್ದೊಡಂ—ತನ್ನಂತೀಲೋಗರೆಲ್ಲರುಂ ಬರ್ದುಂಕುಗೆಂದು ತಾನಿರ್ಪರಮನೆಯ ಮುಂದೆ ಸುತ್ತಲ್ಬಳಸಿದೇಟ್ತರದ ಕಲ್ಲ ಪಾಗಲುಂ, ಬಿತ್ತರದ ಕೈಸಾಲೆಯುಂ, ಬಾಂಬರೆಗಂ ಬಳೆದೇಟಿಕ್ಕೆಲೆಯ ಗೋಪುರಮುಂ, ಮಂಟಪಂಗಳುಮೊಳವಳಯದೊಳಿಡಿದ ಪರಿವಾರದೇವತಾಲಯಂಗಳುಂ, ರಂಗುವಡೆದ ನವರಂಗಮುಂ, ಕಟ್ತಲೆವಳಸುಂ ಗಬ್ಬವನೆಯುಮೊ

ಳ್ಪವಡೆದ ದೇಗುಲವಂ ಕಟ್ಟಿಸಿಯಲ್ಲಿ ಸನ್ನಿದವಾದ ಲಕ್ಷ್ಮೀನೃಸಿಂಹಂಗೆ ತನ್ನ ಬೊಕ್ಕಸದೊಳ್ ಪೆಸರ್ವೆತ್ತ ಮುತ್ತಿನೆಕ್ಕಸರಂಗಳುಂ ಬಜ್ಜರದ ಮುಗುಡಂಗಳುಂ ಪಚ್ಚೆಯ ತೋಳ್ಪಚ್ಚಂಗಳುಂ ಕೆಂಬರಲ ಕಡಗಂಗಳುಂ ಕರ್ಮಣಿಯುಡೆನೂಲ್ಗಳುಂ ಮೊದಲಾದ ಪಲವಣ್ಣದ ಪೊನ್ನರನ್ನದೊಳ್ತೊಡವುಗಳಂ ಮಿಸುನಿಯ ತಟ್ಟೆ ತಳಿಗೆ ಬಟ್ಟಲ್ ಗುಂಬಂಗಳ್ ಮೊದಲಾದುಪಕರಣಂಗಳಂ ಪಲತೆಱದ ವಾಹನಂಗಳಂ ಸಮೆಯಿಸಿ ಬರಿಸದ ತಿಂಗಳ ಪಕ್ಕದ ಪಗಲ ನಿಚ್ಚದ ಜಾತ್ರೆಯುಕ್ಕೆವಂಗಳನೊಡರ್ಚೆ ಮೆಚ್ಚಿಸಿ, ಕಟ್ಟೆ ಕೆಱೆ ಪರಿಕಾಲ್ಗಳಿಂದೊಪ್ಪುವ ನಾಡುಗಳಂ ತದಧೀನಂಗೆಯ್ವಾವಗಂ ತದಾಯತ್ತಚಿತ್ತದೊಳ್ ಪಲವೂೞಿಗಂಗಳನೆಸಗುತ್ತೆ ಪಲವುಂ ಬರಿಸಮಿರ್ದು ತಣಿದು ಪರವಾಸುದೇವನಡಿಯಂ ಪರಿಚರಿಸಲ್ಕೆಂದು ಪರಮಪದಮಂ ಸಾರ್ದಂ.

---

## ದೊಡದೇವರಾಜ ಚರಿತಂ

ಶ್ರೀಮತ್ಸಕಲಸಾಮಂತರಾಜನ್ಯಚೂಡಾವತಂಸಿತ ಪದರಾಜೀವನೆನಿಪ **ದೇವರಾಜಂಗೆ** ನಾಲ್ವರ್ ಕುವರರ್ ಐರಾವತಕ್ಕೆ ನಾಲ್ಕುಂ ನಿಗ್ಗವಂಗಳಂತೆಯುಂ, ಪೊಂಬಸಿಱಂಗೆ ನಾಲ್ಕುಂ ಮೊಗಂಗಳಂತೆಯುಂ, ಪೊಡೆಯುಲರಂಗೆ ನಾಲ್ಕುಂ ತೋಳ್ಗಳಂತೆಯುಂ ಅತಿಶಯಾವಹರೆನಿಸಿ ನೆಗಟ್ದರ್. ಆ **ದೇವರಾಜ**ರಸನ ನಾಲ್ವರ್ ಕುವರರೊಳಂ **ದೊಡದೇವರಾಜಂ** ವರ್ಗಚತುಷ್ಟಯದೊಳ್ ಧರ್ಮದಂತೆಯುಂ, ಉಪಾಯಚತುಷ್ಟಯದೊಳ್ ಸಾಮದಂತೆಯುಂ, ವೇದಚತುಷ್ಟಯದೊಳ್ ಋಕ್ಕಿನಂತೆಯುಂ, ವ್ಯೂಹಚತುಷ್ಟಯದೊಳ್ ವಾಸುದೇವನಂತೆಯುಂ ಮೊದಲಿಗನಾಗಿ ಜಗದೊಳ್ ನೆಗೞ್ತೆವೆತ್ತಂ. ಆತನಿರವನಾರಯ್ದು ಆವಂ ಮೆಯ್ವೆತ್ತ ಚಂದ್ರಕುಲದ ಮ್ಮೆಮೆಯೆಂದುಂ, ಗಂಡುವರಿಜುವಡೆದ ಯದುಕುಲದೇೞ್ಗ

ಯೊಂದುಂ, ಪೊಸತೊಂದು ವೇಷದೊಳೆಸೆವ ಭೂಲೋಕದ ಪುಣ್ಯಮೆಂದುಂ, ಕೈಯ್ಯಾಳ್ದೆಳೆದ ಕನ್ನಡನಾಡ ಕಡುಪೆಂದುಂ, ಪಡಿಯೊಡಲ್ಗೊಂಡ ಸಜ್ಜನರ ಭಾಗ್ಯೋದಯಮೆಂದುಂ ಬಗೆದು ಬಣ್ಣಿಪರ್. ಮತ್ತಮಾತನ ಮೆಯ್ಸಿರಿ ಗಳ್ಕಿಯುಲರಂಬನೊಡಲ್ಬಱಡಾದನೆಂದುಂ, ಮೊಗದೊಳ್ಪಿಂಗೆ ನಾಣ್ಚಿ ಚಂದಿರಂ ಕಂದುದಳೆದನೆಂದುಂ, ತೇಜಕ್ಕೆ ದಿಟಂಗುಂದಿ ಬಿಸುಗದಿರಂ ಬವಣಿಗೊಂಡಪನೆಂದುಂ ಭಾವಿಸುವರ್. ಈತನುಂ ಧರ್ಮದೊಳ್ ಧರ್ಮಸುತನಂ, ಸತ್ಯದೊಳ್ ರಾಮಚಂದ್ರನಂ ದೊರೆಗೊಂಡು ತನ್ನಂ ಬೞಸಂದಾಳ್ಗೆಯ್ವನುಜರ್ವೆರಸು ಸಂತಸದೊಳ್ ತನ್ನ ಬೀರಮಂ ಬಲ್ವಱಕೆಗಾಳೆಗದೊಳ್ ತನ್ನ ಬಿನ್ನಣಮಂ ಪೊರ್ದಿದರಂ ಪೊರೆವುದಱೊಳ್, ತನ್ನೌದಾರ್ಯಮಂ ಓದಾಳಿ ಪಾರ್ವರೊಳ್, ತನ್ನೆಱಕಮಂ ತನ್ನಂ ನಂಬಿದರೊಳ್, ತನ್ನ ದಯೆಯುಂ ಆರ್ತರೊಳ್, ತನ್ನೈಸಿರಿಯುಂ ಆಳ್ಗೊಳ್ಗೞ್ಗೊಳ್, ತನ್ನ ಸೊಬಗಂ ಕೆಯ್ವಿಡಿದ ರಾಣಿಯೊಳ್, ತನ್ನ ಕಡುಪಂ ಕಳ್ಳರೊಳ್, ತನ್ನ ಪುರುಡಂ ಪುಸಿವರೊಳ್, ತನ್ನಾಸೆಯುಂ ಜಸದೊಳ್, ತನ್ನ ಭಕ್ತಿಯುಂ ಪುರುಷೋತ್ತಮನೊಳ್ ಪುದುಗಿಸಿ ಪದುಳದೊಳಗಿರ್ಪಂ. ಮತ್ತಮೊಡನಾಡಿವಗೆಗಳೆನಿಸುವೇಕಾದಶೇಂದ್ರಿಯಂಗಳುಮಂ ಗೆಲ್ದು ಬಸಂಗೆಯ್ದು ಬಲ್ಮೆಯಿಂದೊಳವಗೆಗಳಪ್ಪ ಕಾಮಾದಿಷಡ್ವರ್ಗಮಂ ನೆರ್ಗಿ, ಆವಗಂ ಬಿಜ್ಜೆಗಲ್ವುದುಂ ಬಿನ್ನಣಂಬಡೆವುದುಂ ಬಿನಯಮಂ ತೋರ್ಪುದುಂ ಚಾಗಮನಾಗಿಪುದುಂ ಜಸಮಂ ಪಸರಿಪುದುಂ ಶಕ್ತಿಯುಂ ಬಿತ್ತರಿಪುದುಂ ಶೌರ್ಯಮಂ ಬೀರ್ವರಿಪುದುಂ ಸಾಸಮಂ ಸೂಸುವುದುಂ ಸತ್ಯಮಂ ಸಲಪುವುದುಂ ಜಯಮಂ ಸಂಪಾದಿಪುದುಂ ಮೊದಲಾದೊಳ್ಗೆಯ್ತದೊಳಿಪೊಟ್ಟುಗಳೆಯುತ್ತೆ, ಪುಸಿಗಂ ಪೊಱಟೆಗಂ ಮಾಯೆಗಂ ಮಱವೆಗಂ ಕಳವಿಂಗಂ ಕಪಟಕ್ಕಂ ಹಿಂಸೆಗಂ ಹಿಸುಣ್ಗಂ ಬಿಱುನುಡಿಗಂ ಬೇಂಟೆಗಂ ಪಗಡೆಗಂ ಪಗಲ್ನಿದ್ದೆಗಂ ಜೂದಿಂಗಂ ಜೋಡತನಕ್ಕಂ ಸೊರ್ಕಿಂಗಂ ಸೊಱಹಿಂಗಂ ಇಂಬುಗೊಡದೆ, ಜಸದೊಳಂ ತೇಜದೊಳಂ ಸಸಿನೇಸರ್ಗಳೊಡವೆರೆದೊಂ

ದು ಮೆಯ್ದುಳಿದರೆಂಬ ಸಂದೆಯಮನೊದವಿಸುತ್ತೆ, ಪತ್ತಿದರೊಳಂ ಪಗೆವ
ರೊಳಂ ತಱುವಾಯಿಂ ತಣ್ಪುಬಿಸುಪುಗಳಂ ಪಸರಿಸುತ್ತೆ, ತಾಂ ನಿರ್ಮಳ
ನಾಗಿಯುಂ ಪಗೆರಾಣಿಯರ ಮೊಗದೊಳ್ ಮಾಲಿನ್ಯಮಂ, ಪರಿಶುದ್ಧನಾ
ಗಿಯುಂ ಪ್ರಜೆಗಳೊಳ್ ರಾಗಮನಾಗಿಸುತ್ತೆ, ಬೀರದ ಮೊಳೆ ಬಿನ್ನಣದ
ಬೆಳೆ ದಯೆಯ ಸೊಂಪು ದಾಕ್ಷಿಣ್ಯದ ಪೆಂಪು ನಯದ ಕೂರ್ಪು ನನ್ನಿಯಾ
ರ್ಪು ಚದುರ ಬಲ್ಪು ಜಾಣ್ಮೆಯೊಳ್ಪು ಜಯದ ಮೋಡಿ ಜಸದ ಗಾಡಿ
ದಾನದ ಪೂಣ್ಕೆ ಧರ್ಮದ ಕಾಣ್ಕೆ ತಿಳಿವಿನ ಮಚ್ಚು ಧೀರತೆಯ ಪೆಚ್ಚು
ಒಸಗೆಯುರ್ಬು ಒಜೆಯ ಕೊರ್ಬು ಸಿರಿಯ ಕೂಟಂ ಸಿಂಗರದಾಟಂ
ಒಲವಿನಣ್ಪು ಉತ್ಸವದ ನಣ್ಪೆಂದು ಬಲ್ಲರ್ ಬಗೆಯೆ, ಬೆಟ್ಟದಂತೆಯುಂ
ಪೆರ್ಗಡಲಂತೆಯುಂ ಇನಿತಿಸಿತರ್ಕೆ ಕಂಪಿಸದೆ ಕದಡದೆ ಇಂತಿರ್ಪವನ ನಿಱು
ಗುರುಳಂ ಪೆಱೆನೊಸಲಂ ಕುಡುಪುರ್ವಂ ಕುಡಿತೆಗಣ್ಣಂ ಮೊನೆವಲ್ಲಂ
ಮುಗುಳ್ನಗೆಯುಂ ಕೆಂಬಾಯ್ದಱೆಯುಂ ಕಂಬುಗಳಮುಂ ತೋರಗಂದ
ಮುಂ ಪೇರೆರ್ದೆಯುಂ ನಿಡುದೋಳಂ ಬಡನಡುವಂ ಮಿಸುಪ ತೊಡೆಯುಂ
ಮೆಲ್ಲಡಿಯುಂ ಕಂಡು ಮರುಳ್ಗೊಂಡು ಮೇರೆವಿಱಾಱು ಮೆಯ್ಮಱೆದೆಕ್ಕಟಿ
ಯೊಳ್ ಸೂರ್ಕಿ ಮೇಲಿಕ್ಕುವ ಸಱಿವಿಂಡಿವೆಣ್ಗಳಂ ಸದೆದು ಭಂಗಿಪ
ಸತ್ಯಸದಾಚಾರಂಗಳಿಂದೆಯುಂ, ನನ್ನಿಯ ನಲ್ಲನೆನ್ನಿಸಾಣ್ಮಂ ಪುಸಿವರ
ಬೊಜಗಂ ಮುದ್ದುಗರ ಮೊದಲಿಗನಾರ್ಪರರಸನಳವಿಗರಾಣ್ಮನುರ್ಕುಳ್ಳ
ರೋಪನೆಟ್ಟೆಱುವರಿಯೆಮಂ ಇಱಿತಗಾಱರೆಱೆಯುಂ ಬಲ್ಲಿದರ ಬಲ್ಲಹನೆಂ
ಬಿವು ಮೊದಲಾದ ಪಲವುಂ ಬಿರುದಂ ಕೇಳ್ದು ಕಿಡಿಗೆದಱಿ ಕಿನಿಸು
ಕೇಣಂಗೊಂಡು ದಂಡೆತ್ತಿ ನಡೆವ ಬಲ್ಪಗೆವಡೆಯುಂ ಬಂಡುಗೆಯ್ವ ಶೌರ್ಯ
ಪರಾಕ್ರಮಂಗಳಿಂದೆಯುಮೊಂದಿ ಜಸಂಬಡೆದೆಸೆವೀತನಂ ಮುಂ ನೋಂತ
ಪಲನೋಂಪಿಗಳಿಂದೆ, ದಮಯಂತಿ ನಳನಂ, ಸುದಕ್ಷಿಣೆ ದಿಲೀಪನಂ, ಜಾ
ನಕಿ ರಾಮಚಂದ್ರನಂ, ರೋಹಿಣಿ ಚಂದ್ರಮನಂ, ಶಚೀದೇವಿ ದೇವೇಂ
ದ್ರನಂ, ಗಿರಿಜೆ ಶಂಕರನಂ, ಸಿರಿಯರಸಿ ನಾರಾಯಣನಂ ಸಾರ್ದಂತೆ

ಸಾರ್ದ **ಅಮೃತಾಂಬಿ**ಯೆಂಬರಸಿ ಎಡೆವಿಡದೆ ಕಾಂತಿ ಸೂರ್ಯನೊಳ್ ಕಳೆ ಚಂದ್ರನೊಳ್ ಕಂಪು ಬಾವನ್ನದೊಳ್ ಪುದಿವಂತೆ ಪುದುಗಿ ಪೋಱದೋಱ ದೆ, ಮನ್ವಾದಿ ಸತ್ಕೃತಿ ವೇದಾರ್ಥಮಂ, ಜಸವೆಣ್ ಜಯವಂತನಂ, ಮತಿ ಬಿಜ್ಜೆವಳನಂ, ಧೃತಿ ದೃಢಸತ್ವನಂ, ಶುದ್ಧಿ ಸುಚರಿತ್ರನಂ, ಕ್ಷಮೆ ಜಿತಾತ್ಮನಂ, ದಯೆ ಧಾರ್ಮಿಕನಂ, ನೀತಿ ನೇಮಗಾಱನಂ ಬೞಿಸಲ್ವಂತೆ ಬೞಿಸಂದಿರ್ಪಳ್.

ಇಂತಿರ್ವರುಂ ಪಲವುಂ ಬರಿಸಂ ಪೊಸಪೊಸತೆನಿಸಿ ಪಸರಿಸುವ ನೇಹದಿಂ ಸಂತಸಮಿರ್ಪಿನಂ;

ಅರಸಿಯೊರ್ವಗಲ್ ಚಿಂತೆಯಿಂದೆವೆಯಾಟಮಂ ಮಱೆದು ಮೌನದೊಳಿರ್ಪಿನಂ; ಅವಳಂ ಕೆಳದಿಯರುಂ ಬಗೆಯಱಿದೊಳ್ಮಾತಿನಿಂದೊಯ್ಯನೊಡಂಬಡಿಪಂತವುರದ ಬರ್ದೆಯರುಂ ಬಳಸಿರೆ, ಎಡಗೆಯ್ದಳದೊಳ್ ಮೊಗದಾವರೆಯಿಟ್ಟು ನಿಟ್ಟುಸಿರ್ವಿಡುತ್ತೆ, ಎಡೆಯೆಡೆಯೊಳಿಮೆವೊಯ್ಲಿಂದುದಿರ್ವ ಕಣ್ಬನಿಯಿಂ ದುಗುಲಮಂ ನನೆಯಿಸುತ್ತೆ ಜಾನದೊಳಿರ್ಪಿನಂ;

ಅರಸಂ ಪತ್ತೆಸಾರ್ದಿದಿರೇೞ್ವುದಂ ಮಾಣಿಸಿ, ತಾನುಮಾಮೆಲ್ವಾಸಿನೊಳ್ ಕುಳ್ಳಿರ್ದು—''ಎಲೆಯರಸಿ! ನೀನುಟ್ಟು ತೊಟ್ಟೆಣ್ಪಿಟ್ಟು ಪೂಮುಡಿದಾನಂದಂಬಡೆಯದೆ ಬಱಿದೇಕೆ ಪಗಲ್ ಕಂಡ ಪೆಱೆಯಂತೆ, ಮುಂಜುಮುಸುಕಿದ ತಾವರೆಯಂತೆ, ಪೊಗೆಸುತ್ತಿದ ಪುತ್ತಳಿಯಂತೆ, ಬಿಸಿಲ್ಪೊಡೆದ ನೆಯ್ದಿಲಂತೆ, ಬಾಡಿ ಬಣ್ಣಂಗುಂದಿ ಬಸವೞಿದು ಜಾನಿಸುತ್ತಿರ್ಪೆ? ಏಪರಿಯೆಣಿಸಿದೊಡಮೆನ್ನೊಳಮೆನ್ನಂತವುರದವರೊಳಂ ತಪ್ಪಿನಿತುಮಿಲ್ಲಂ. ಅದೆತ್ತಣಿಂ ಬಂದುದೆಂತು ಮೊಳೆತುದೇಪರಿಯೊಳ್ ಬಳೆದುದೇತೆಱದಿಂ ನೆಲೆಗೊಂಡುದಿದೇನುಬ್ಬೆಗಮೋ ಮುಳಿಸೋ ಮಱುಕಮೋ ಪೇೞ್? ಎಟ್ಟಪೊರ್ಡೆನ್ನಂ ಮೊಗನೋಡು, ನುಡಿಸು, ಬಣ್ಣಿಸು.'' ಎಂದು ಪಲರ್ಮೆ ಬೆಸಗೊಳೆಯುಂ, ಪಡಿನುಡಿಗುಡಲಣ್ಮದೆ ಕೆಲದೊಳಿರ್ಪ ಕೆಳದಿಯ ಮೊಗಮಂ ನೋಡೆ, ಅವಳ್ ಮೆಲ್ಮಾತಿನಿಂದೆ—

"ಎಲೆ ದೇವ! ದೇವರ್ ದಯೆಗೆಯ್ವೆಡೆಯೊಳ್ ಕೊಱತೆಯೆತ್ತಣಿಂ ಬರ್ಪುದು? ಎತ್ತಾನುಮುಳ್ಳೊಡಂ ದೇವರಡಿಯೊಳರಸಿಯರ್ಗೆ ಮುನಿಸೆನಿತು ಸಮನಿಪುದು! ಆಯೆಣಿಕೆ ನಿಲ್ಕೆ. ಮೋಣರಸಿಯರ್ ಪಲವುಂ ದಿವಸದಿಂ ಶಿಶುವಂ ಬಯಸಿ ಬೇವಸಂಗೊಂಬುದೆನಿತಾನುಮುಂಟು. ಇನಿಸುಂ ಪೊೞಿತ್ತೊಂದೆಡೆಯೊಳ್ ನಿಲ್ಲದೆ ಕುಳ್ಳಿರದೆ ಮಲಂಗದೆ ದುಗುಲಮಂ ತೊಡವಂ ತಿಲಕಮುಂ ಮುಡಿವ ಮಾಟಮುಂ ಮೀಳೆಯುಮನೆಮ್ಮ ನಿರ್ಬಂಧದಿಂದೆಸಗುತ್ತೆ ದೇವರಡಿಯೊಳ್ ಭಯದಿಂದೊಂದು ವೇಳೆಯುಂ ಕಂಡು ಕಾಣಿಸದಿರ್ಪಳ್. ಈಪೊೞ್ತು ಭಾಗವತಶ್ರವಣಂಗೆಯ್ವಲ್ಲಿ—

—ಶ್ರೀಕೃಷ್ಣನ ಬಾಲಲೀಲೆಯ ವರ್ಣನೆ—

ಗೊಲ್ಲವಳ್ಳಿಯೊಳೆಳಸಿಸುತನದೊಳೆಸೆವ ವಾಸುದೇವಂ ನೆವಮಿಲ್ಲದೆಡೆಯೆಡೆಯೊಳ್ ಮಸಗುವ ಮುದ್ದುನಗೆಯುಂ, ಒರ್ಕೆಯ್ಯೊಳೆೞೆದು ಚೆಂಬಾಯೊಳಿಂಬುಗೊಳಿಸಿದ ಮೆಲ್ಲಡಿಯುಂಗುಟಮುಂ, ಮುತ್ತಿನೆಕ್ಕಸರದೊಳ್ ಕಟ್ಟಿ ನೇಲ್ದ ನೀೞ್ಕೆಯುಂ ನೀೞ್ದುಯ್ಯಲಾಡುವ ಕೆಂಬರಲ ಸೆಂಡನಂಡಲೆವ ಪೆಱಗೆಯ್ಯುಂ, ಬಗೆಗಱಿ ಪರಿತಂದು ನಿಟ್ಟೆಸಿ ಮಣಿದು ಮೊಗದೊಳ್ ಮೊಗಮಿಟ್ಟು ಮುದ್ದಿಸಿ ಮೆಯ್ಮಱೆವ ಗೋಪಿಯ ಮೊಲೆಯುಣಲೆಳಸಿ ನಿಮಿನಿಮಿರ್ದು ನೀೞ್ದುತೆಳವಳ್ಳಿದೋಳ್ಗಳಂ ನೆಗನೆಗಪಿ ನೀಡುತಡಿಯಿಡುವ ತವಕದೊಳುಲಿವ ಕಿಱುಗೆಜ್ಜೆಯಂದುಗೆಗಳುಂ, ನಸುಜೋಲ್ದೆಳಗಿವಿಯನಲೆವ ಪಚ್ಚೆಯ ಮಾಂಗಾಯ ತಾಕಿನೊಳ್ ಮಸುಳಿಸುವೆರಡುಂ ಮೆಲ್ಗದಂಪುಗಳೊಳಿಟ್ಟ ಕತ್ತುರಿಯ ದಿಟ್ಟಿಬೊಟ್ಟುಂ, ಕಿಱುಗುರುಳೊಳ್ ಕೋದು ಕಟ್ಟಿದ ಕೆಂಬರಲರಳೆಲೆಯ ಲಂಬಣದ ಮುತ್ತಿನ ಪೆಱೆಯಂತೆ ಮೆಱೆವ ಪೆಱೆಗೆಱೆಯ ನಾಮಮುಂ ಮನಂಗೊಳೆ ಪೊಂದೊಟ್ಟಿಲೊಳ್ ಮಲಂಗಿದ ಪಾಂಗಂ। ಮತ್ತಮೆಳಸಸಿನೊಸಲೊಳ್ ಕವಿವ ನಿಱುಗುರುಳುಂ, ಅರೆದೆಱೆದ ಕಡೆವಾಯೊಳ್ ಸೂಸುವಿಂಚರಿಯಿಂ ನನೆದ ನಸುದೋಱುವುಸಿರುಂ, ಮುಂ ಜಗಮಂ ಪಡೆವಾಗಳ್ ಮೊಗದೊಳ್

ಮೊಗೆದು ಮೊಳೆದೋಱಿದ ಪಾವಕನಂ ಪಡಿಗೊಳ್ವ ಶ್ರೀಚೂರ್ಣತಿಲಕಮುಂ, ಕರ್ಮುಣಿವೊಗರ್ವಡೆದಿರ್ದ್ದೆಯಾಗಸದ ಸೊಬಗಿಂಗೆ ಸೋಲ್ತಿರ್ದೆಯ್ದೆ ಳಿದುದಿಸಿದ ಪೊಸವೆಱೆಯುಂ ಪೋಲ್ವ ಪುಲಿಯುಗುರುಂ, ಪೆಱಸಾರ್ದದಡಿಯ ಕಿಱುಗೆಜ್ಜೆಯುಲಿಗೇಳ್ದು ಮಡಮುಱಿದು ಪಸರಿಸುವೆಸಟ್ಟಿಣ್ಣೆಳಗುಂ, ಪಿಡಿಪಿಡಿದೆೞೆಯೆ ಪಱಿದುದಿರ್ದರಳೆಲೆಯ ಲಂಬಣಸರದ ಮುತ್ತುಗಳ್ ಊಱಿದೊರ್ಕೆಯ್ದುಳಮನೊರ್ಮೊೞಕಾಲನೊತ್ತುವಿನಂ ಅಲ್ಲಿ ನಿಂದವಂ ಬೆದಕುವ ಮೊಳೆವೆರಲ್ಗಳುಂ, ತುಂಬಿದ ಪೊಂದಳಿಗೆಗಳಂ ತುಡುಕಿ ಕೌಚಿ ಪರಿವ ತಿಳಿನೀರೊಳ್ ತನ್ನ ಪಡಿನೆೞಲಂ ಕಂಡು ಪೊಡೆಯೆ ಸಿಡಿವ ಸೀರ್ಪನಿದಳೆದ ಸಿರಿಯೊಡಲುಮಾಗಿ, ಅಂಗಳದೊಳ್ ತಳರ್ವ ತನ್ನ ಬೞಿವಿಡಿದು ಮನದೊಡನೆ ದಿಟ್ಟಿಯಂ ಸುೞಿಸುೞಿಸಿ ಸೊಗಂಬಡೆದು ಸೊರ್ಕಿ ಮೇಲಿಕ್ಕಿ ಪಿಡಿದೆತ್ತಿ ತೞ್ಕೈಸಿ ಮಗ್ಗುಲಂ ಸಾರ್ಚಿ ಮೊಗ ನೋಡಿ ಮೊಲೆಯೂಡೆ ಪಾಲ್ಗುಡಿಯುತ್ತೆ ಮೊಳೆವಲ್ಮಿಸುಗೆ ಎಡೆಯೆಡೆಯೊಳ್ನಗುವ ಗಾಡಿಯಂ। ಬೞಿಕ್ಕಡಿಗಡಿಗೇಟ್ಟೆ ಬೀೞ್ವಾಯಸದಿಂ ಪೊಡೆಯೊಳಿಡಿದ ಪಲವುಂ ಜಗಮುಂ ಕಂಪಿಸದಂತೆ ಬಿಗಿದು ಕಿೞ್ಪಡೆಯೊಳ್ ಕಟ್ಟಿದ ಪವಳದಮುಳ್ಕೀವಳದೊಳ್ ನೇಲ್ವ ಪೊಂಗಿಱುಗಂಟೆ ಉಲಿಯ ದಂತೊರ್ಕೆಯ್ಯೊಳ್ ಪಿಡಿದು ಒಯ್ಯನೆಡಗೋಣೆಗೆ ನಡೆತಂದು ಅಲ್ಲಿ ಗೋಪಿ ಕಡೆಗಂದಲೊಳ್ಬೆಣೆ ಗಳೆಯದುೞಪಿಯೊಲೆಯೊಳುರ್ಕೆಯುಗುವ ಪಾಲ್ಗಂದಲನಿೞಪಿ ಬರ್ಪನಿತಱೊಳಾಕಡೆಗಂದಲಿಂ ಮಂತಿನೊಳ್ ಪೊಯ್ದೊಡೆದು ಆಬೆಣ್ಣೆಯೊಳ್ ಬೇೞ್ಪನಿತುಮಂ ನುಣ್ಣನೆ ನುಂಗಿ ತಣ್ಣನೆ ತಣಿದು ಉೞಿದುದಂ ಕೊಂಡಂಗಳಕೆ ನಡೆದು ಅಲ್ಲಿ ನಟ್ಟನಡುವೆ ನಟ್ಟ ಪೊಂಗೞ್ತೆಯೊಳ್ ಕಟ್ಟಿರ್ದ ಕರ್ಗೋಡಗದ ಸರಪಳಿಯ ಕೀಲಂ ಕೞಲ್ಚಿ ಪೆಡದಲೆವಿಡಿದದನೆೞ್ದುಯ್ಯಾರುಮಱಿಯದಂತೊಂದು ಮೂಲೆವನೆಯೊಳ್ ಮರವೊರಲೇಱಿ ಮಂಡಿಸಿ ಬೆಣ್ಣೆದಿನಿಸಿಯೊಡನುಂಡುದನುಗುೞ್ದುದು ದಂಡಿಸುವಿನಮದರ್ಕದು ಬೆದಱಿ ಪಲ್ಗಿಱಿವುದುಮದಂ ಬೆಣ್ಣೆಗೆತು॰

ಬೆರಲಿಂ ತೆಗೆಯುತ್ತಮಿರೆ, ಮುಂ ಮನೆವಾೞ್ತೆಗೆಯ್ದು ಬಂದ ನಂದವಧು ಕಂದಲೊಡೆದುದಂ ಕಂಡದಂ ತನ್ನ ಕಂದನೆಸಕಂಗೆತ್ತು ಸಂತಸದೆ ನಸು ನಗುತ್ತಲ್ಲಿಯುಮಿಱಿಸಿ ಕಾಣದಲ್ಲಿಗೆ ನಡೆತಂದು ನಿಂದಾಮಾೞ್ಕೆಯುಂ ಕಂಡಳ್ಕಿ ನಸುಮುನಿಸಿಂದೆ—ಎಲೆ ದುಱುದುಂಬಿ, ಸಿಲ್ಕಿದೆಯ್ಸೆ! ನಿನ್ನುದ್ದುರುಟುತನಕ್ಕೆ ತಕ್ಕ ಬುದ್ಧಿವೇೞ್ವೆನೆಂದದ್ದರಿಪುಮಾದನಿಗೇಳುತ್ತ ವಳ ಕೋಲ್ವಿಡಿದ ಕೆಯ್ಯುಂ ಕುಡಿಗೊಂಡ ಪುರ್ಬುಂ ಕೆಂಗಣ್ಣುಂ ಕೂರ್ನೋಟಮುಮಾದ ಕೋಪಾಟೋಪಕ್ಕಂಜಿ ತನ್ನಂ ಮಾಂಜಲೆಂ ದತ್ತಣಿನೆೞ್ದು ಬೀದಿವರಿಯುತ್ತೆ ಮನೆದೇಗುಲಮನಂಗಳದೆಳದೊಳಸಿದೋಂ ಟಮಂ ಕಱುದುಱಗಳ ಕೊಟ್ಟಿಗೆಗಳುಮಂ ಪೊಕ್ಕು ಬವಣಿಗೊಂಬ ತನ್ನಂ ಬೞಸಲ್ವಾಯಸದಿಂ ಬೆಮರ್ದ ಮೊಗಮುಂ ಪೆರ್ಚಿದ ಸುಯ್ಯೆ ಲರುಂ ಸಡಿಲ್ದ ಮುಡಿಯುಂ ಸರಿದ ಮೇಲುದುಂ ಬಳ್ಕುವ ನಡುವುಂ ಬಸವೞಿವ ನಡೆಯುಮಾದ ತಾಯ ಬೞಲ್ಕೆಗಂಡೊದವಿದ ಮಱುಕದಿಂ ನಾಲ್ಮೊಗಂ ಮಾದೇವಂ ಮೊದಲಾದ ಬಾಂಬಟ್ಟೆಗರ ದಿಟ್ಟಿಗಂ ಪರಮ ಯೋಗಿಗಳ ಬಗೆಗಂ ಮೆಯ್ಗುಡದ ಬೊಮ್ಮನವಳ ಕೆಯ್ವಸಮಾಗುತ್ತೆ ಹದುಗಿ ಹಂಮ್ಮೈಸಿ ನಡನಡುಗಿ ಪನಿಸೂಸುವ ಬಗಸೆಗಣ್ಣಿಂ ಮುಚ್ಚಿ ಪೊಱಗೆಯ್ಯಿಂದೊಱಸುತ್ತೆ ನಿಲ್ವುದುಂ, ಅವಳುಮುಳ್ಕಿತ್ತು ಕೊಲಲೆತ್ತಿದ ಕೋಲಂ ಕೆಲಕಿಟ್ಟು ಕಟ್ಟುಱದೊಳ್ಬಿಟ್ಟತ್ತನೆ ನಿಟ್ಟುರಮಂ ನುಡಿದು ಕಟ್ಟಿ ನಿಲಿಸಲ್ಕೆಂದು ತೊಟ್ಟನೊಂದು ಕಡೆದಾವಂ ಪೊಡೆವಳಿಸಿ ಪಿಡಿವಿನ ಮೆರಟ್ಬೆರಲಳವುಂ ಕಡಮೆಯಾಗೆ ಬೇಗದೆ ತನ್ನ ಇರ್ನೆರೆಯ ಬೀದಿಯ ಪಳ್ಳಿಯ ಮನೆಗಳೊಳುಳ್ಳ ದಾವನಿತುಮಂ ತಂದು ಗಂಟಿಕ್ಕಿದೊಡಮುಳ ವಡದಿರೆ ಆವಳೞಲಿ ಬೞಲ್ವಿನಂ, ಮನಂಗಱಗಿ ನೆಟ್ಟನೆ ಕಟ್ಟುವಡೆದಿರ್ಪ ಕಟ್ಟೊಳ್ಪುಮಂ। ಮತ್ತಂ—"ಕೇಳೆಲೆ ಗೋಪಮ್ಮ! ನಿಮ್ಮೊರೊ ಳಿರ್ದೆಮ್ಮವಂದಿಗರ್ ಮನೆವಾೞ್ತೆಗೆಯ್ವುದರಿದು. ನಿನ್ನ ಮಗನಟ್ಟಳಿ ಬೆಟ್ಟಿತ್ತು. ಈ ಪೊೞ್ತಱತಯೆೞ್ದು ಎಡೆಗೋಣೆಯೊಳ್ ಕಡೆಯುತ್ತಿರ್ಪನಂ;

ಮನೆವೊಕ್ಕುವಂದು ತೊಟ್ಟಿಲೊಳ್ ಪಟ್ಟಿರ್ದ ಮಗುವಂ ತುಱುಪುದ ಮಾದನಿಗೇಳ್ದಾಂ ಕಡುಗಿ ನಡುಮನೆಗೆಯ್ತರ್ಪನಿತಱೊಳತ್ತಣಿಂ ಪರಿದಂ ಗಳಕ್ಕೆ ನಡೆದಲ್ಲಿ ಕಟ್ಟಿರ್ದೆಳಗಱುವಂ ಬಿಟ್ಟದಱ ನಾಲವಂ ಪಿಡಿದು ಬಿಡದೆ ಪರಿದಂತೆ ಪರಿದು ನೆಗೆದಂತೆ ನೆಗೆದು ಪತ್ತಿಸಾರ್ವಿನಮಾತುಱ ಮುಱುಕದಿನೆಟ್ಟು ಮೊಗಂ ಮುಱಿದು ನಟ್ಟಾಲಿಯಿಂ ನಿಟ್ಟಿಸುತ್ತೆ ಪೆಱಗಾ ಲ್ಗಳಿನಿನಿಸುಂ [ಕುನುಂಗಿ]ನಿಂದು ಮೊಲೆಯುಣವಂದ ಕಱುವಿನ ಮೆಯ್ಗಂ ಪಂ ಸವಿದು ತೊಱೆಯಿಟುಪಲೊಡಮಾಕಱುವುಂ ನೆಗಪಿದ ಬಾಲಮುಂ ನಿಮಿರ್ದ ಪೆಱಗಾಲ್ಗಳುಂ ನೆಗೆದ ಮೊಗಮುಂ ನಟ್ಟ ಮುಂಗಾಲ್ಗಳು ಮಾಗಿ ಮೊಲೆಗುಡಿವ ಬೆಡಂಗಂ ನಿರವಿಸಿ ತಾನುಮದಱಂತೆ ನಾಲ್ಗಾ ಲೊಳ್ ನಿಂದು ಮೊಗನೆಗಪಿ ಮೊಲೆಯುಣ್ಬನಿತಱೊಳಾನುಂ ಬಂದು ಕಱೆಯಲನುವಪ್ಪುದುಂ, ಬೆದಱಿಯತ್ತಣಿಂ ಬೀದಿವರಿದು ಮೆಯ್ಮಱಿಸಿ ಮಗುಟ್ದುಂ ಮನೆವೊಕ್ಕು ಕಂದಲ ಬೆಣ್ಣೆಯನಿತುಮಂ ತಿಂದು ಪೋದಂ'' ಎಂದು ದೂಱುವೆಡನೆರೆಮನೆಯ ಮಡದಿಯುಂ ; ಮತ್ತಂ—'' ಎಮ್ಮ ಚತ್ವರದೊಳ್ ಕಱುನಾಲವಂ ಕರ್ಗೋಡಗದ ಗಡ್ಡದೊಳ್ಗಂಟಿಕ್ಕಲೊಡ ಮವೆರಡುಮೊಂದರ್ಕೊಂದು ಬಿಗುತರ್ು ಪಡುವ ಪಲವುಂ ಚಾಪಲಮುಂ ನಿರವಿಸುತ್ತಿರ್ಪಿನಮಾನುಂ ಬಂದು,—ಎಲೆಲೆ ಕಳ್ಳಂ ಕೆಯ್ಪಟ್ಟನೆಂಬುದು ಮೊದವಿ ಮೆಯ್ಮಱಿಸಿ ಮನೆವೊಕ್ಕಲ್ಲಿಯೊಲೆಯೇಱಿಸಿದ ಪಾಲ್ಗಂದಲಂ ಕಡೆವೆಡೆಯೊಳಂ ಕಡೆವ ಮೊಸರ್ಗಂದಲನೊಲೆಯೊಳಂ ಪಲ್ಲಟಂಗೊಂಡಿ ರಿಸಿ ಸಿಸುಗೆಱೆಯಲೆಂದಿರಿಸಿದ ಬಿಸುನಾಲ್ವೆಣ್ಣೆಯಂ ಸವಿದಾಪೊಂದಟ್ಟೆ ಯೊಳ್ ಸುಣ್ಣಮನಾತಿಳಿಯುಮಂ ತುಂಬಿ ಮೋಸಂಬಡಿಸಿದಂ '' ಎಂದು ಲಿವ ಬಲನೆರೆಮನೆಯ ಭಾವೆಯುಂ; ಮತ್ತಂ—'' ಪೊಟ್ಟಱೆಯಾಂ ಕಱೆಯುತ್ತಿರ್ಪಿನಂ ತನ್ನಂ ಬಟಿಸಲ್ವ ಪಲವುಂ ಕುವರರ್ವೆರಸೊಳ ಪೊಕ್ಕು ಬಳಸಿಯುಂ ನೋಡಿ ಕಾಣದೆ ಕೋಣೆಯೊಳ್ ಕಟ್ಟ ನೇಲ್ವ ನೆಲ ವಿನೊಳ್ ಮೊಸರ್ಗಂದಲಂ ಕಂಡು ಕಡೆಗೋಲಂ ನೆಗಪಿ ಕುಟುಕುವಿನಂ

ನೀಟ್ಟಿದಿರೆ ಮಣಿಯುಂ ಮರವೊರಲಂ ಮಕ್ಕಳಂ ಕುಳ್ಳಿರಿಸಿ ಪೆಗಲೇಱಿ ನಿಂದು ಕಂದಲಂ ಕುಟುಕೆ, ಸುರಿವ ಮೊಸಱ ಸರಿಯುಂ ಸವಿಯುತ್ತಿರ್ಪಿನಮೆನ್ನೀಪೆಣ್ಮಗಳ್ ಪೋಗಿ ಕಂಡು ಕಳ್ಳಂ ಕಳ್ಳನೆಂಬುದುಮೊದಗಿ ಬಾಯೊಳಿಡಿದ ಮೊಸಱನವಳ ಮೊಗದೊಳ್ ಮುಕ್ಕುಳಿಸೆ ಕಣ್ಮುಚ್ಚುವುದುಂ ಗಳ್ಳನೆ ತಟಿಕ್ಕಿಗೆಯ್ದು ಮೊಗದೊಳ್ ಮೊಗವಿಟ್ಟು ಮುದ್ದಿಪ ನೆವದಿಂ ಗಾಸಿಗೆಯ್ವನಿದೆ ನೋಡು '' ಎಂದು ಮಗಳ ಬಾಯ್ದೆಱೆಯುಂ ತೋಱೆ ದೂಱುವ ಮುಮ್ಮನೆಯ ಗರತಿಯುಂ; ಮತ್ತಂ—ಎಮ್ಮಂಗಳದೊಳ್ ಪಂಜರದ ಕೀಲಂ ಕಟಿಲ್ಚಿ ಗಿಳಿಯಂ ತಱುಬಿದನೆಂದುಂ, ಆಡುವೆಳವಕ್ಕಳ ಕಣ್ಗೆ ಮೆಟಿಸಿಕ್ಕಿದನೆಂದುಂ, ಮಲಂಗಿದ ಪೆಣ್ಗಳ ಮೊಗಕ್ಕೆ ಮಸಿಗಱೆಯುಂ ಬರೆದನೆಂದುಂ, ಮುದುಪಂ ಬಾಯ್ದೆಱೆಯುದಂತೆ ಬಿಗಿದು ಗಡ್ಡಮೀಸೆಗಳಂ ಗಂಟಿಕ್ಕಿದನೆಂದುಂ, ಸಿಸುಗಳಾಡುವ ಪೊಡೆಸೆಂಡಂ ಕೊಂಡುಯ್ದನೆಂದುಂ, ಪೊಂಬೊಗರಿಯನಪಹರಿಸಿದನೆಂದುಂ, ಕವಡೆಗಳಂ ಕವರ್ದನೆಂದುಂ, ಇವು ಮುಂತಾದ ಪಲವಂ ಪೊಲ್ಲದ ನಡತೆಗಳಂ ಸೊಲ್ಲಿಪ ಬೀದಿವನೆಗಳ ಪೆಂಡಿರ್ಗಳುಂ—ತಮ್ಮೊಳ್ತಾವೆ ನಾಣ್ಚಿ ತಲೆವಾಗಿ ಬೇಗದೆ ಮೋನದೆ ಪೋಪಂತೆ ತಾಯ ಮಗ್ಗುಲಿನೆಟ್ಟು ಸಿರಿಮೊಗಂದೋಱುವ ಮುದ್ದುಮಗೆಯುಂ। ಮತ್ತಂ ನೆತ್ತಿಯೊಳ್ ಸಿರಿಮೆಯ್ವೊಗರ್ ಮೇಗಣ್ಗೆ ನೆಗೆದೊಟ್ಟಗೊಂಡಂತೆ ಮೆಱೆವ ಚಂಡಿಕೆಯುಂ, ಅಲ್ಲಿ ಮೊತ್ತಂಗೊಂಡ ಕಟ್ಟಲೆಯತ್ತಲಿತ್ತಲುಂ ಬಿತ್ತರಿಸಿದಂತೆ ಸುತ್ತಮುತ್ತಿದೆಳನೇಸರ್ಗದಿರಂ ನೆರಂಗೊಂಡು ಚಂಡಿಕೆಯೊಳ್ಕಟ್ಟಿರ್ಪ ಪೊಂಗುಂಡುಸರಮುಂ, ಜಗಮನೊಗೆಯಿಸುವಾಗಳ್ ಆವಗಮೊಗೆಯಿಸಿದಭ್ಯಾಸದಿಂದೀಗಳುಂ ಬಗೆಯೊಳಂ ಕಣ್ಣೊಳಂ ಪೊಣ್ಮಿ ನಿಂದೆಳಸಸಿನೇಸರ್ಗಳ್ ಸಿರಿಗುರುಳ್ಗಟ್ಟಲೆಯೊಳ್ ಕೇಣದಿಂದಿರ್ದಿರೇಱಿದಂತಿರ್ಪ ಪೆಱೆಗೆಱೆನಾಮ ಕೆಂಬರಲರಳೆಲೆಗಳುಂ, ನಿಡುಗಣ್ಬಾಟೆಮೀನ್ಗಳುಗುಟ್ಟುವೆಂಬಂತೆಸೆವ ಮುತ್ತಿನ ಕಿವಿವಚ್ಚಮುಂ, ತ್ರಿಗುಣಮಯಮಾದ ಸೃಷ್ಟಿಗೆಯ್ಮೆಲೆಂದೆತ್ತಿಕಟ್ಟಿದ ಬಿತ್ತು

ಗಳ ಮೊತ್ತದಂತೆಸೆವ ಮುತ್ತಿನ ಕೆಂಬರಲ ಕರ್ವಣಿಯ ಕಂಠಸರಂಗಳುಂ, ಬಾನೊಳಂ ಬಾನ್ಗುರುಳನ ತಲೆಯೊಳಂ ನೆಲಸಲ್ಕೆಂದಿರ್ವೆಯ್ದುಳಿದು ಮನ ದೊಳ್ ಪೊಣ್ಮಿದೆಳವೆಱ ಪೊಱಗಣ್ಗೆ ಪಡಿನೆಟಿಲ್ಗೊಂಡಂತೆಸೆವ ಪುಲಿ ಯುಗುರ್ವಚ್ಚವುಂ, ಕಲಿಯುಗದೊಳ್ ಬಳೆವ ಸಿರಿಮೆಯ್ಯ ಕರ್ವೊಗರ್ ಪೊಱಮಡಿಸಿದೊಡಂ ಬಿಡದೆ ತೊಡರ್ವ ಪಿಂತಣ ದ್ವಾಪರದ ಘಳಧಿವಣ್ಣ ದಂತಿರ್ಪ ಪೊಂದುಗುಲವುಂ, ನಡುವಳಸಿ ಸುತ್ತಿಯುದಱಿಳ್ ಸಿಲ್ಕಿಸಿದ ಪೊಂಗೊಳಲುಂ, ಏೞುಂ ಜಗಮನೊಳಕೊಂಡೊಡಂ ತಣಿಯದ ಬಸಿಱಿಂ ತುಂಬಲ್ಕೆಂದು ಕಿಱುಗಲ್ಲಿಯೊಳಿಟ್ಟ ಕಕ್ಷದೊಳ್ ನೇಲ್ವ ಕಟ್ಟೋಗರ ಮುಂ, ಕೆಯ್ಯೊಳ್ ಪಿಡಿದ ಕಿಱುಗೋಲುಮಾಗಿ ತನ್ನಂತೆಸೆವ ಸಾಸಿ ರ್ಗವರರ್ವೆರಸು ಕಱುಗಾಯಲ್ಕೆಂದು ಕಾನನಮಂ ಪೊಕ್ಕಲ್ಲಿ ಕಱುಗಳ ಮಂದೆಯೆಲ್ಲಮನೊಂದುವೆರಸಿ ಮೇಯಲ್ಕೆ ನಿಲಿಸಿ, ತಾನುಂ ಜಗುನೆಯ ತಡಿಯೊಳ್ ಜಾನಿಸುವಳ್ಳಿಗರೊಡನೆ ಕುಳ್ಳಿರ್ದರೆಗಣ್ಮುಚ್ಚಿ ಜಾನಿಸುತ್ತುಂ, ಮೊರೆಯುತ್ತೆ ಬವಣಿಗೊಂಬ ತುಂಬಿಗಳೊಡನೆ ಸುತ್ತಿ ಮೊರೆಯುತ್ತುಂ, ಕುಕಿಲ್ವ ಕೋಗಿಲೆಗಳಂ ಬೞಸಂದು ಕೂಗುತ್ತುಂ, ಕಮರ್ುಗಿಲ ಕರು ವಿನಂತೆ ಮೆಱೆವ ತನ್ನ ಸಿರಿಮೆಯ್ಯಂ ಕಂಡು ಸೊರ್ಕೇಱಿ ಕುಣಿಯುವ ಸೋಗೆಯೊಡನೆ ಕುಣಿಯುತ್ತುಂ, ಆಗಸದೊಳ್ ಪಾಱುವ ಪಕ್ಕಿಗಳ ನೆೞ ಲಂ ತಱುಬಿ ಪರಿಯುತ್ತುಂ, ಏಡಿಸುವ ಕೋಡಗಂಗಳನೇಡಿಸುತ್ತುಂ, ಅವಱ ಕೊನೆವಾಲಂಗಳಂ ಪಿಡಿದು ಬಿಡದೆ ಕೊಂಬಿನತ್ತಣಿಂ ಕೊಂಬಿಂಗಂ ಮರ ದತ್ತಣಿಂ ಮರಕ್ಕಂ ನೆಗೆಯುತ್ತುಂ, ನೀರ್ತಡಿಯೊಳ್ ಕುಪ್ಪಳಿಸುವ ಕಪ್ಪೆ ಗಳೊಡನೆ ಕುಪ್ಪಳಿಸುತ್ತುಂ, ಪಡಿನೆೞಲಂ ಪೊಡೆಯುತ್ತುಂ, ಪಡಿನುಡಿಯಂ ಬಯ್ಯುತ್ತುಂ, ಪಿರಿದುಂ ಪೊೞ್ತುಗಳೆದುಣಲೆಳಸಿ ಕಿಱುವೊನಲ್ವಳಸಿದ ಪುಳಿ ನವನಮಂ ಸಾರ್ದು ಅಲ್ಲಿಯೋರೊರ್ವರ ಕಲ್ಲಿಗಳನೋರೊರ್ವರ್ ಕಳು ತ್ತುಂ ಒಲ್ಮೆಯೊಳಿತ್ತುಂ ಮೇಗಣ್ಗೆಡುತ್ತುಂ ಆನುತ್ತುಂ ತಣಿದು, ಪದು ಳದೊಳ್ ಕಟ್ಟೋಗರಂಗಳಂ ಬಿಟ್ಟು, ತಾವರೆಯ ಕರ್ಣಿಕೆಯಂ ಬಳಸಿದೆ

ಸಬ್ಬಿಗಳಂತೆ ನಟ್ಟನಡುವಿರ್ಪ ತನ್ನಂ ಬಳಸಿ ಮುಂಡಿಸಿದ ಕೆಳೆಯರನಿಬರ್ಗಂ ತನ್ನ ಸಿರಿಯೋಗರದ ಸವಿಯಂ ತೋಱಿ, ತಾನುಮವರೋಗರಂಗಳಂ ಸವಿಯುತ್ತುಂ ನುಡಿಸುತ್ತುಂ ನಗಿಸುತ್ತುಂ ಪಸಿವಂ ಕಳೆದು, ಇಱಿವೊೞ್ತಿನೊಳ್ ಮರಂಗಳ ತಳಿರ್ ನನೆಯಲರ್ ಮಿಡಿಕಾಯ್‌ಪಣ್ಗಳಿಂದೆಯುಂ ಮುಂ ತಾಯೊಡರಿಸಿದ ಪಲವುಂ ತೊಡವುಗಳಂ ಮಱಸಿ ಮನಂಗೊಳಿಸಿದ ಸಿಂಗರಂಗಳಂ ತಳೆದು, ಬೆಟ್ಟುಗಳ ತಪ್ಪಲೊಳಿರ್ಪ ಅರಿದಳಕಾವಿಗಲ್ಗಳಿಂ ದಣ್ಪಿಟ್ಟು, ತನ್ನಂತೆ ತನ್ನೊಡನಿರ್ಪ ಪಲವುಮೆಳಗೋವಳರುಂ ಮುಂದೆ ನಡೆವ ಕಱುವಂದೆಯುಂ ಬಳಸಿ ಕೈಪೆಱಗುಟ್ಟುತ್ತೆ ಕುಣಿವೆಳಗೋವಳರು ಮೊಡೆವರೆ ಪುರವೀಥಿ ತುಂಬಿ ಬರ್ಪ ಬೆಡಂಗುಮಂ। ಕೇಳ್ದು ತಾವುಮಾ ತೆಱದ ಕುವರನಂ ಪಡೆಯಲ್ಕೆ ನೋಂಪಿಗೆಯ್ವ ಪೆಂಪಂ ಚಿಂತಿಸುತ್ತಿರ್ಪರ್ ''—

ಎಂದು ನುಡಿವ ಕೆಳದಿಯ ಮೊಗದಾವರೆಯೊಳ್ ಕಡೆಗಣ್ದುಂಬಿಗಳಂ ಸುೞಿಸಿ ಅರೆವೆಱನೊಸಲೊಳ್ ಮಿಱುಪ ಕಱಗೆಱಯೆನೆ ನಿಱಿಗೊಳ್ವ ಪುರ್ಬುಗಳಿಂ ಜರ್ಬುವೆರಸಿಯೆನಸು ನಾಣ್ಬೆರಸಿದ ಮುನಿಸಿನೆಸಕಮನೆರ್ದೆಗೊಳಿಸಿ ಅಂತರಂಗದೊಳ್ ಪೊಂಗುವ ಸಂತಸವಂ ಸಂತವಿಸಿ ಸಂತಾನಚಿಂತಾಸಂತಾಪವನಭಿನಯಿಸುತ್ತೆ ಕಿಱಿದುಂ ಪೊೞ್ತು ಮೋನದೊಳಿರ್ದು ನಿಡುಸುಯ್ದು ನುಡಿದಂ :—

ಅರಸೀ! ಕೇಳೀಜಗದೊಳೆಂತಪ್ಪರ್ಗಂ ತನಯರ್ಗಳಂ ಪಡೆವ ಚಿಂತೆ ದುರಂತಮಾಗಿರ್ಪುದು. ಅದಱೊಳಂ ಸಿರಿಯುಮರಸುತನಮುಮುಳ್ಳೊಡೆ ಪೇೞ್ವುದೇಂ? ಅಂತಾದೊಡಮೀಯದುಕುಲಲಲಾಮರೆನಿಪ ಮಹೀಶೂರಪುರದರಸುಗಳ ಲೇಸಂ ಬಳೆಯಿಸಲೆಳಸಿ ಸಿರಿಯರಸಿವೆರಸಿ ಯದುಶಿಖರಿಶಿಖರದೊಳ್ ನೆಲಸಿಯಖಿಲಜಗತ್ಕಾರಣನಪ್ಪ ನಾರಾಯಣಂ ಪೊಣೆಯಾಗಿರ್ಪಂ. ಈ ಚಿಂತೆಯಂ ತವಿಪುದು.—ಎಂದಿವು ಮೊದಲಾದ ಪಲವುಂ ಹಿತೋಪದೇಶಂಗಳಿಂದರಸಿಯ ಕಡುದುಗುಡಮಂ ಕಳೆದು ನಡೆ

ದರಮನೆಯ ದೇಗುಲಮಂ ಸಾರ್ದಲ್ಲಿ ಮುಂ ತಂಮೋಲ್ಟ್ರದರಸುಗಳೊ ಡರ್ಚನೆವರ್ಚನೆಗಳಿಂ ಪೆರ್ಚುಗೆವಡೆದ ಗೃಹಾರ್ಚಾಗೋಪಾಲನ ಶ್ರೀಪಾದ ಪದ್ಮಂಗಳ್ಗೆ ಸಾಷ್ಟಾಂಗವೆಱಗಿ ಭಕ್ತಿಭರದೊಳ್ ನುತಿಗೆಯ್ಯುತ್ತಿರ್ಪಿನಂ;

ಅನ್ನೆಗಂ **ಅಳಹಿಯ ಸಿಂಗರಾರ್ಯರ್** ಇತ್ತ ಬ್ರಾಹ್ಮಮುಹೂರ್ತ ದೊಳುಪ್ಪವಡಿಸಿ ಸ್ವಾಚಾರ್ಯರಂ ಮೊದಲೆನೆ ಸಿರಿಯರಸಂಬರೆಗಮಾದ ಪರ ಮಾಚಾರ್ಯರಂ ಜಾನಿಸಿ, ಸ್ನಾನಾದಿನಿತ್ಯಕರ್ಮಾನುಷ್ಠಾನತಿರುವಾರಾ ಧನಂಗಳಂ ನೆರವಣಿಗೆಗೊಳಿಸಿ, ಶಿಷ್ಯರ್ಗೆ ಶ್ರೀಭಾಷ್ಯ ಶ್ರುತಪ್ರಕಾಶಿಕೆಗಳಂ ಪ್ರಕಾಶಮಾಗಿ ತಿಳಿವಂತು ಸೈತುಪದೇಶಿಸಿ, ಶಾಂತಿಪಾಠಾನಂತರದೊಳ್ ರಹಸ್ಯಾರ್ಥಂಗಳಂ ಬಿತ್ತರಿಸಿ, ಅಬಳಿಕ್ಕೆ ನಿತ್ಯನಿಯತಮಾದ ಗೀತಾರ್ಥ ಮಂ ನಾಮತೀರ್ಥಸಮಯದೊಳರಸಂಗಱಿಪಲೆಳಸಿಯರಮನೆಗೆ ತಕ್ಕ ಪಸದನಂಗೊಂಡು, ಶಿಷ್ಯಸಂಘಂ ಬಳಿವರೆ ತಿರುಮಾಳಿಗೆಯಂ ಪೊಱ ಮಟ್ಟು, ಪೊನ್ನಂದಳಮನೇಱಿ, ಅರಮನೆಯ ಬಾಗಿಲಂ ಸಾರ್ವಿನಂ—

ಅಲ್ಲಿ ಸಂದಣಿಸಿ ನಿಂದಿರ್ಪ ಮಂದಿ ಕುದುರೆ ಪೇರಾನೆ ತೇರ್ಗಳ ಭಾ ರಣೆಗಳಂ ತೇರ್ದೈಸಿ ಪಲನಾಡುಗಳಿಂ ಪಲತೆಱದ ಕಪ್ಪಂಗಳಂ ಕೊಂಡು ಕಾ ಣ್ಕೆಗೆ ವಂದಿರ್ಪ ನೆಲದೆರೆಯರ ನೆಱವಿ ಇರ್ತರದೊಳಮಿರ್ಕವಿಸಿ ಸಾಲ್ಗೊಂ ಡು ತಂತಮ್ಮ ವಾಹನಂಗಳಿಂದಿಳಿತಂದು ಪರಿವಿಡಿಯಿಂದೆಱಗಿ ಪರಕೆಗಳಂ ಸಿರದೊಳಾಂತು ಹರಿಸಂದಳೆಯೆ, ಕಱುನಾಡದರಮನೆವಾಗಿಲಂ ಪೊಕ್ಕು ಮಿಕ್ಕು ಬರ್ಪಾಗಳ್—ಇರ್ಕೆಲದೊಳಂ ಕಕ್ಕಸದ ಸೊರ್ಕಿನುರ್ಕಾಳ್ಗಳಿಕ್ಕೆ ತಳದಿಂ ಬಂದು ಮೆಯ್ಯಿಕ್ಕಲವರನಟ್ಟುಱಿಂ ತಕ್ಕವೋಲಾದರಿಸುತ್ತುಂ ಸಾರಿ ಬರೆ; ಹಜಾರದ ತೊಟ್ಟಿಯೊಳಿಟ್ಟಣಿಸಿ ನಿಂದ ಭಟ್ಟನಟ್ಟುವಿಗರುಂ, ಕಟ್ಟಂದದಿಂ ಬಿಟ್ಟಕಣ್ಣ ಬಿಡಪೆಂಡಿರನಂಡಲೆವ ಸಿಂಗರದ ಬೆಲೆವೆಣ್ಗಳ ವಂ ಗಡಮುಂ, ಮುಂಗುಡಿಯೊಳ್ ಸಿಂಗಂಗಳಂತಂಗವಿಸಿಯೊತ್ತರದಿಂ ತೆತ್ತೈಸಿ ನಿಂದ ಬಾಹತ್ತು ನಿಯೋಗಿಗಳುಂ, ದಿಗ್ದೇಶದ ನಿಯೋಗಿಗಳುಂ, ಬೇಗದಿಂ ಬಂದು ಕೆಯ್ಗಳಂ ಮುಗಿಯುತ್ತುಮಿರಲಿರ್ತೆಱದೊಳಂ ಕೂರ್ತು ಮನ್ನಿ

ಸುತ್ತಿರ್ಪ್ಪ ಮತ್ತಮಾವೊತ್ತಿನ ಚಿತ್ತರದ ಬಾಗಿಲೋವರಿಯೊಳಾವಗಂ ತೀವಿ ಕಾವಲಿರ್ಪ ಬಲ್ಲಿದರಪ್ಪ ಗೊಲ್ಲರೆಲ್ಲರುಮಲ್ಲಿ ನಿಂದು ಪೊಡೆಮಡುತುತ್ತ ಮಿರೆ ಬಿಡಯುಂಬೆರಸು ಕಡುದಯದಿಂ ನಿಟ್ಟಿಸುತ್ತೆ ಮುಂದುವರಿದಂದ ಳವುನಿಱಿದು ಮುಂದಣ ಮೊಗಸಾಲೆಯು ತೊಟ್ಟಿಯುಂಗಳದ ಮುಂ ಗುಡಿಯು ಬಾಗಿಲ ಪಡಿಯುಜಿರ್ ಪಿಡಿದ ಪೊಂದಡಿಗಳಿಂ ನೆಲಗಟ್ಟಿನ ಪಲಗೆಯುನಪ್ಪಳಿಸಿದ ಸೊಪ್ಪುಳಂ ಕೇಳುತ್ತೆ ತತ್ತರದಿಂ ತಂತಮ್ಮ ತಾಣಂಗಳಿಂದಿೞಿತಂದು ಹಂತಿಗೊಂಡು ತಿಂತಿಣಿಸಿ ತುೞಿಲ್ಗೆಯ್ವ ಸಾ ಮಂತ ಮಂತು ಮನ್ನೆಯು ಮಂಡಳಿಕರಂ ಭಂಡಾರಿಕರಂ ಸಜ್ಜೆವಳರಂ ಬಿಜ್ಜೆವಳರಮಡಪವಳರಂ ಪಡೆವಳರಂ ಘೋಟಾಯ್ಲರಂ ಝುಳಂ ಬಾಯ್ತರಂ ಪಸಾಯ್ತರಂ ಪ್ರೇಮದಿಂದವರವರಂತರವಱಿತು ಮಧು ರೋಕ್ತಿಗಳಿಂ ಸಂತಸವಡಿಸುತ್ತಲ್ಲಿಂ ಮುಂದೆಸೆವ ಕಜುನಾಡದೊಳ ನಾಗಿಲೊಳಗಣೋವರಿಯೊಳಿರ್ಪ ಮಂತ್ರಿಪ್ರಧಾನಿಗಳುಂ ರಾಯಸ ದಕ್ಷರಚಣರುಮಣಿಯುರದಿಂ ಮಣಿಯುಲವರ್ಗಳ ಮನವುಂ ನಲ್ವಾತು ಗಳಿಂ ತಣಿಯಿಸುತ್ತಂತವುರದ ಬಾಗಿಲಂ ಸಾರ್ದಲ್ಲಿರ್ಪ ವರ್ಷವರಾದಿಗಳ್ಗಾ ಶೀರ್ವಾದಪ್ರಕರ್ಷದಿಂ ಹರ್ಷಮನೆಸಗಿ, ಅಲ್ಲಿಂ ಮುಂದಿರ್ಪ ನಾಮತೀ ರ್ಥದ ಚವುಕಿಗೆಯು ಮುಂದಣ ಮೊಗಸಾಲೆಯೊಳೋಲಗಿಸುವ ಶಂಖ ಕಾಹಳೀವೇಣುವೀಣಾಮೃದಂಗತಾಳಢಕ್ಕಾದಿನಾದಕರುಂ ಸಂಗೀತನಿಪು ಣರುಂ ಪ್ರಣಮಿಪುದಂ ನಿಟ್ಟಿಸಿ ಪದುಳಿಸುತ್ತಾತೊಟ್ಟಿಯೊಳಪುಗುವಿನಂ ;

—ಅಳಹಿಯ ಸಿಂಗರಾರ್ಯರ ವರ್ಣನೆ—

ತತ್ಕಾಲೋಚಿತರಾಗಲ್ಲಿರ್ಪ ಸಾಮಾಜಿಕರೀಯಳಹಿಯಸಿಂಗರಾ ರ್ಯರಂ ನಿರವಿಸಿ ಯಿವನಂ ಇಂದ್ರಂಗೆತ್ತು ಪರಿತರ್ಪ ಬೃಹಸ್ಪತಿಯೋ, ದಶರಥಂಗೆತ್ತು ಪತ್ತೆಸಾರ್ವ ವಸಿಷ್ಠನೋ, ಜನಕಂಗೆತ್ತೇೞ್ತರ್ಪ ಯಾಜ್ಞ ವಲ್ಕ್ಯನೋ, ಯುಧಿಷ್ಠಿರಂಗೆತ್ತು ಬೞಿಸಲ್ವ ಧೌಮ್ಯನೋ, ಜನಮೇಜ ಯಂಗೆತ್ತು ಬಂದ ವೈಶಂಪಾಯನನೋ ಎಂದು ಪೌರಾಣಿಕರೆಣಿಸುತ್ತಿರೆ;

ಮತ್ತಂ, ಮುಂ ತಾನನುಗೊಳಿಸಿದ ವೇದಶಾಸ್ತ್ರಂಗಳ್ ಕಲಿದೋಷದಿಂ ವ್ಯಾಕುಲವಾಗೆ ಮಗುಳ್ದವೆಲ್ಲಮಂ ಮುನ್ನಂತನುಗೊಳಿಸುವ ವ್ಯಾಸನೋ, ಮಗುೞ್ದೊರ್ವರ್ ಪರಾವರತತ್ವಮಂ ತಿಳಿಪಲಿೞ್ದು ತಂದ ಪರಾಶರನೋ, ಪೆಱತೊರ್ವರ್ ಭಗವದ್ಭಕ್ತಿಯಂ ಬಿತ್ತರಿಸಲುದಿಸಿದ ಶುಕಮುನಿಯೋ, ಇನ್ನು ಮೊರ್ವರ್ ಹರಿಹರಬ್ರಹ್ಮರಿರವನಾರಯ್ದು ಹರಿಯೇ ಪರಬ್ರಹ್ಮಮೆಂಬುದಂ ನೆಲೆಗೊಳಿಸಲೊಗೆದ ಭೃಗುಮುನಿಯೋ! ಎಂದು ತತ್ವಜ್ಞರ್ ಬಗೆಯುತ್ತಿರೆ;

ಮತ್ತಂ, ಬೇಱೊರ್ವರ್ಯಾಱುಂ ದರ್ಶನಂಗಳನಾರಯ್ದು ವೈಷ್ಣವಮೇ ಸಾರಮೆಂದೊರೆವ **ಭಕ್ತಿಸಾರನೋ,** ತಾಂ ತಾಮೆಳಸಿದ ದೇವರಂ ಪರತತ್ವಮೆಂದು ವಾದಿಸುವೋದಾಳಿಪಾರ್ವರ ಗರ್ವಮಂ ಕತ್ತರಿಪ **ವಿಷ್ಣುಚಿತ್ತನೋ,** ಮುಂ ತಾಂ ಶ್ರೀರಂಗವೇಂಕಟಾದ್ರಿಪ್ರಮುಖ ದಿವ್ಯದೇಶಾಶ್ರಯನಪ್ಪ ಶ್ರಿಯಃಪತಿಯ ದಿವ್ಯಮಂಗಳ ಗುಣಂಗಳಂ ಕಿಱಿದುಂ ಬರಿಸಮನುಭವಿಸಿದುದಱಿಂ ತಣಿಯದೆ ಪೊಸಮೆಯ್ಗೊಳೆದಿೞಿದ ಶಠಕೋಪನೋ, ಮುಂ ತನ್ನಿಂ ಬನ್ನಂಬಡೆದ ವಾದಿಗಳೀಗಳ್ ಮಱುವುಟ್ಟಿನೊಳಂ ತಿಳಿವೞಿದು ಕೆಲರ್ ವೇದಮಪ್ರಮಾಣಮೆಂದುಂ ಕೆಲರ್ ವೇದಪ್ರಾಮಾಣ್ಯಮನಂಗೀಕರಿಸಿಯುಮರ್ಥದೊಳೆ ಭ್ರಮಿಸೆ ಬೆಳಕಿಂಗೆತ್ತಿದ ಸೊಡರೊಳ್ ಸಿಡಿದು ಬೀೞ್ವ ಪತಂಗದಂತೆ ರೂಪೞಿದು ಪೋಗುತ್ತಿರೆ ಅವರ ಮರುಳಂ ಕಳೆದು ಶ್ರೀಮನ್ನಾರಾಯಣನೇ ಪರತತ್ವಮೆಂದುಮವನ ಭಕ್ತಿಯೇ ಮುಕ್ತ್ಯುಪಾಯಮೆಂದುಂ ಅವನಿಂ ಪುಟ್ಟಿದ ಜಗಮನಿತುಂ ಸತ್ಯಮೆಂದುಂ ಅವಂಗಾಳ್ಗಳೆನಿಸಿದ ಜೀವಾತ್ಮರ್ ಅವನ ದಿವ್ಯಾಜ್ಞಾರೂಪಮಾದ ವರ್ಣಾಶ್ರಮಾಚಾರಂಗಳನನುಸರಿಸಲ್ವೇೞ್ಪುದೆಂದುಂ—ಇವು ಮುಂತಾದ ಹಿತೋಪದೇಶಂಗಳಿಂ ಜಗಮನಿತುಮುಜ್ಜೀವಿಸಲ್ ಜನಿಸಿದ **ರಾಮಾನುಜನೋ,** ಎಂದು ಪರಮಸಾತ್ವಿಕರ್ಭಾವಿಸುತ್ತಿರೆ;

ಉದಯಗಿರಿಶಿಖರದೊಳುದಿಸುವ ರವಿಬಿಂಬದಂತೆ ಸಿರಿಮುಡಿಯೊಳ್ ಧರಿಸಿದ ರಕ್ತಪಟ್ಟೋಷ್ಣೀಷಮುಂ, ಸಿರಿಮೊಗದಾವರೆಯೊಳ್ಗಂಪನೆಳಸಿ ಬಳಸುತ್ತಿ ನಾಸಾಚಂಪಕಕ್ಕಳ್ಳಿಯೆರಡುಂ ಕಿವಿಗಡೆಯೊಳ್ಗಾಲ್ಗೊಂಡು ಸಲ್ವ ತುಂಬಿವಿಂಡುಗಳಂತಿರ್ಪ ಕಾಲಕರ್ಬಟ್ಟೆಯ ಸೆಱಂಗುಗಳುಂ, ಮುನ್ನಾಗಸಮನಳೆವಾಗಳ್ ತನ್ನುಗುರ್ಗೊನೆಸೋಂಕಿಂ ಪಱಿದಂಡಕಟಾಹ ಬಾಹ್ಯಜಲಮಿರ್ತರದೊಳ್ ಪರಿಯುತ್ತಿರೆ ಮೆಱೆವ ತ್ರಿವಿಕ್ರಮನ ಚರಣಾಂಗುಷ್ಠನಖಮಂಡಲಮೆನೆ ವಿಮಲೋರ್ಧ್ವಪುಂಡ್ರದಿಂದೆಸೆವ ಮುಖಮಂಡಲಮುಂ, ಆವೂರ್ಧ್ವಪುಂಡ್ರಮನ ಪುಂಡರೀಕಪ್ರಕಾಂಡಂಗೆತ್ತಲ್ಲಿ ಮಂಡಿಸಿದ ಸಿರಿಯರಸಿಯ ಪೊಂಜೆಳೆಮೆಯ್ಯಂ ಪೋಲ್ವ ಶ್ರೀಚೂರ್ಣತಿಲಕಮುಂ, ಮೊಗಮನಿತುಮಂ ವ್ಯಾಪಿಸಲೆಳಸುವ ಬಗಸೆಗಣ್ಗಳಂ ಮೇರೆಯೊಳ್ ನಿಲಿಸುವೆಲ್ಲೆಗಟ್ಟೆಗಳಂತಿರ್ಪ ಪುರ್ಬುಗಳುಂ, ಎಮಗಿದಿರಪ್ಪ ವಸ್ತುಗಳನಲ್ಲದೆ ತಿಳಿವುದರಿದು ನೀಮುಭಯವಿಭೂತಿಗಳೊಳಿರ್ಪುದನಿತುಮಂ ತಿಳಿದಿರ್ಪ ತೆಱನಾವುದೆಂದು ಬೆಸಗೊಳಲೆಳಸಿದಂತೆ ಕಿವಿವರೆಗೆ ಪರಿದ ಕಣ್ಮಲರ್ಗಳುಂ, ಕಡಲಂ ಕಡೆದು ಸೊದೆಗೊಂಬಂತೆ ಶಾಸ್ತ್ರದೊಳ್ ಸಾರಾಲ್ಪಸಾರಸಾರತರಗಳಂ ಕಳೆದು ಸಾರತಮಮಾದ ಮೂಲಮಂತ್ರದರ್ಥಂಗಳಂ ಸಂಗ್ರಹಿಸಿ ಸದಾಚಾರ್ಯರುಪದೇಶಂಗೆಯ್ದುದಱಿಂದಾಯೆಂಟುಮಕ್ಕರಂಗಳೊಳ್ಪುರುಳ್ಗಳ್ ಬೇಱೆಱೆ ರೂಪುವೆತ್ತು ಕಿವಿಯಂ ಪತ್ತಿದುದೆಂಬಂತಿರ್ಪ ಚೌಕುಳಿಗಿವಿವಚ್ಚಮುಂ, ತುಂಬಿ ತುಳುಂಕುವುಭಯವೇದಾಂತಸಾರಸಾಗರದ ತೆರೆಗಳಂತೆಯುಂ ಸತ್ಯಲತೆಯ ಪೂಗೊಂಚಲಂತೆಯುಂ ಸತ್ವಗುಣದುನ್ಮೇಷದಂತೆಯುಂ ಅಂತಃಕರಣಪ್ರಸಾದದಂತೆಯುಂ ಧರ್ಮಾಂಕುರಂಗಳಂತೆಯುಂ ಬೆಳತರ್ಪ ಪೊಱಸೂಸುವ ನಸುನಗೆಯುಂ, ರಜಸ್ತಮೋಗುಣಂಗಳೆರಡುಮಂ ಕಳೆದು ತಾನೊಂದುಮೆ ಮುಮ್ಮಡಿವೆತ್ತು ಸತ್ವಗುಣದಂದದಿಂ ಕಂದದೊಳೆಸೆವ ಯಜ್ಞೋಪವೀತಮುಂ, ಮಾನಸಪೂಜಾಸಮಯದೊಳಂತರಾತ್ಮಂಗರ್ಪಿಸಿದ ದುಂಡುಮಲ್ಲಿಗೆಯ ನನೆಗಳ್ ನಿರ್ಮಲಹೃದಯದೊಳ್

ಪೊಱಗಣ್ಗೆ ಕಂಗೊಳಿಸಿದಂತೆ ಪೇರೆರ್ದೆಯೊಳೆಸೆವ ಮುತ್ತಿನೆಕ್ಕಸರಮುಂ, ಅದಱ ನಡುಗಂಪಿಂಗೆಱಗಿದ ಪಱಮೆವಱಿಗಳ ಸಾಲ್ಗಳಂತೆಸೆವ ತೊಳಚಿ ತಾವರೆಮಣಿಗಳ ಸರಂಗಳುಂ, ಮೇರುವಿನ ತಪ್ಪಲೊಳ್ ಕಾಯ್ವ ಬೆಳ್ದಿಂಗಳಂತೆಯುಂ ಆಯೆಡೆಯೊಳ್ ಪರಿವ ಮಂದಾಕಿನೀಪ್ರವಾಹದಂತೆಯುಂ ಮೆಯ್ಯೊಳ್ ಪೊದೆದುಟ್ಟ ಧವಳಪಟ್ಟಾಂಶುಕಯುಗಳಮುಂ—ಮನಂಗೊಳೆ ಬಱಿವರುವ **ಅಳಹಿಯ ಸಿಂಗರಾರ್ಯ**ರನಾದರದೊಳ್ ಕಣ್ಗೊಳಿಸುತ್ತ ರಸನ ಸಂಮೊಗದ ಕೃತಮುಖರ್ ಮನದೊಳೆಣಿಸಿದರದೆಂತೆನೆ :—

ಈಮಹಾನುಭಾವನೆಳಮೆವಿಡಿದೆಮಗೊಳ್ಗೆಳೆಯುಮೊಡನಾಡಿಗನುಮಾಗಿರ್ದೊಡಂ ಶಮದಮಾದಿಗುಣೈಕಾಶ್ರಯನಾಗಿರ್ದೊಡಮಿವನೊಡಲೊಳಿಡಿದ ಕಡುಪೊಗರ ಪೆರ್ಕಳದಿಂ ಗಳ್ಳನೆ ನೋಡಲುಂ ನುಡಿಸಲುಮುಸದಳಮಾಗಿರ್ಪುದು ಸಾಜಮಿನಿತಾನುಂ ಬಿಜ್ಜೆಗಳ ಪೊಸಸಿರಿ ಮೊಗದೊಳ್ ಮಿಸುಗುತಿರ್ಕುಂ. ಈತೆಱದಿಂ ಪದದೊಳ್ ಪತಂಜಲಿಯುಂ, ವಾಕ್ಯದೊಳ್ ಜೈಮಿನಿಯುಂ, ಸ್ಮೃತೀತಿಹಾಸಪುರಾಣವೇದವೇದಾಂತಂಗಳೊಳ್ ವ್ಯಾಸನಂ ದೊರೆಗೊಂಡಖಿಲತತ್ವಂಗಳಂ ಕರತಲಾಮಲಕಮೆನೆ ತಿಳಿದು ತಿಳುಪಲೀಮಹಾಮಹಿಮನ ಪ್ರೈಮೆಯಂ ಪೇೞ್ವುದೇಂ ? ಕಲಿಯೆಂಬ ಕರ್ಗಾಲದೊಳ್ ಕದಡಿದೆಲ್ಲಾಬಿಜ್ಜೆವೊೞಿಗಳುಮಿವನೆಂಬ ಶರತ್ಸಮಯಮಂ ಸಾರ್ದು ಕಲುಷಮಂ ಕಳೆದು ತಿಳಿಗುಂ. ಇವನಾಧಾರದಿಂದೀಧರೆಯಾಂಗಿರಸನ ಸಂಗತಿಯನಗ್ಗಳಿಸುವ ಸಗ್ಗದೇೞ್ಗೆಯಂ ತಱ್ಗಿಸಿರ್ಕುಂ. ಸರಸತಿಯುಮೀತನಂ ಸೇರ್ದು ಸಿರಿಯರಸಿಯೊಳ್ ಬೇರಮಂ ಪರಿಹರಿಸಿ ಸಂತತಮುಂ ಸಂತಸದೊಳಿರ್ಕುಂ. ಶ್ರುತ್ಯಂತದೊಳ್ ಬಿತ್ತರಂಬಡೆದ ಮೂವತ್ತೆರಡುಂ ಬ್ರಹ್ಮವಿದ್ಯೆಗಳುಂ ಮುಂ ಪರಾಶರ ವ್ಯಾಸ ಶುಕ ಶೌನಕ ನಾಥ ಯಾಮುನ ರಾಮಾನುಜರೊಳಿರವಿಲ್ಲದೊಡವೆರದಿರ್ದಂತೆ ಇವನೊಳಂ ತಮ್ಮೊಳವಂ ತಿಳುಪಿ ನಂಬಿ ಸೊಗಂಬಡೆದಿರ್ಕುಂ. ಮಿಕ್ಕುದೇಂ ? ಬೆಳ್ವಕ್ಕರಿಗರೊಳ್ ಸಿಲ್ಕಿ ಕಕ್ಕಸಂಬಡುವೆರಡುಂ ವೇದಾಂತಗಳುಮಿವನ ಸಂಗತಿಯಿಂ ಪೊಂಗಿ ಪೊಗ

ರ್ವಡೆದಿರ್ಕುಂ. ಇಂತಪ್ಪವರಂ ನೆನೆದೊಡಮೆಂತಪ್ಪೆಡರ್ಗಳುಂ ತೀರ್ಕುಂ; ಪೆಸರ್ಗೊಂಡೊಡಮೊಡಲ್ವಿಡಿದ ಪಾಪಮನಿತುಂ ಪೋಪುದು; ಕಂಡೊಡಂ ಕರೆಗಣ್ಮುವ ಕರಣಂಗಳ್ ಕೈಬಸಮಕ್ಕುಂ. ಆವಗಮೊಡನಾಡಿಯುಂ ನುಡಿಗೇಳಿಯುಂ ಬಿನಯಂಗೆಯ್ದುಂ ಬೇಟ್ಪುದನಿತ್ತುಂ ಮನ್ನಿಪರುನ್ನತಿಗೆ ಮಿತಿಯಾವುದು ? ಇವರ್ನೊಳ್ ಬಱಸಂದೊಂದೊಂದೆ ದಿನಮೋದುಗಲ್ತೊಡಂ ಒದುಗಳೊಳಗುದಿಳಿದು, ಕಾಮಕ್ರೋಧಾದಿಗಳಂ ಕಳೆದು, ಸಂದೆಯುಮಂ ಕೆಲಸಾರ್ಚಿ, ಕದುಬಂ ಕಡೆಗಣಿಸಿ ಕುಲಪತಿಗಳೆನಿಸುವರ್. ಇವರಂತಿರ್ಕೆ ! ಮತ್ತಮೆಂತಪ್ಪ ದುರ್ದಾಂತರಾದೊಡಂ ದುರುಳರಾದೊಡಮವರ ಕಲ್ಲೆರ್ದೆಗಳುಂ ಸಸಿಯುಂ ಕಂಡ ಸಸಿವಣಿಯಂತೆ ತಣ್ಪೇಱ ಕಱಂಗುಗುಂ. ತಮ್ಮ ಸಂಬಂಧದಿಂದಮೆ ಪೆಱರಂ ಬಸವಱಸಿಯುಱವುಗೆಡಿಪುದೇ ಸಾಜಮಾದ ದುರ್ಗುಣಂಗಳುಮಿವನತ್ತಣಿಂ ತಂತಮ್ಮ ಕಡುಪಂ ಕಳೆದು ಸದ್ಗುಣಂಗಳೆನಿಕುಂ. ಅದೆಂತೆನೆ:—ಕಾಮಮುಂ ಅಲ್ಪಂಗಳುಮಸ್ಥಿರಂಗಳುಮೆನಿಸುವೈಹಿಕಾಮುಷ್ಮಿಕಫಲಭೋಗವಿಮುಖಮಾಗಿ ಭಗದ್ಗುಣಾನುಭವವಿಷಯುಮೆನಿಸಿ ಭಕ್ತಿಯೆನಿಪುದು। ಕ್ರೋಧಮುಂ ಜ್ಞಾತಿಸಾಮಂತಾದಿಗಳನುಱದಂತರ್ಬಾಹ್ಯಕರಣಂಗಳೊಳ್ ಪೊಂಗುವ ಪೊಲ್ಲದ ನೆನಪಂ ಸಲ್ಲದ ನುಡಿನಡತೆಗಳುಮಂ ವಿಷಯಂಗೊಂಡು ವೈರಾಗ್ಯಮೆನಿಪುದು। ಲೋಭಮುಂ ಧನಧಾನ್ಯಾದಿಗಳನಲ್ಲಗಳೆದು ಸದೋಷರಪ್ಪ ಸಂಶ್ರಿತಜನವಿಷಯುಮಾಗಿ ವಾತ್ಸಲ್ಯಮೆನಿಪುದು। ಮೋಹಮುಂ ಪರಾವರತತ್ತ್ವಂಗಳ ನೆಲೆಯಿಂ ಕೆಲಸಾರ್ದು ಸ್ವಕೀಯಗುಣಗಣಮಾಹಾತ್ಮ್ಯಮಂ ಪತ್ತಿರ್ಪುದಱಂ ಸೌಶೀಲ್ಯಮೆನಿಪುದು। ಮದಮುಂ ವಿದ್ಯಾಧನಾಭಿಜಾತ್ಯಾದಿಗಳಿಂದಲ್ಲದೆ ಭಗವದ್ಭಾಗವತ ಕೃಪಾಸಂಪನ್ನಮಾಗಿರ್ಪುದಱಂ ಭಗವನ್ಮಹಿಮಾನುಸಂಧಾನಮೆನಿಪುದು। ಮಾತ್ಸರ್ಯಮುಂ ಭಗವದ್ವಿಷಯುದತ್ತಣಿಂ ಪೆಱತೆನಿಪ ಮಂತ್ರಸಾಧನದೇವತಾವಿಷಯುಮಾಗಿರ್ಪುದಱಂ ಸ್ವರೂಪಜ್ಞಾನಾಂತರ್ಗತಮಾಗಿರ್ಪುದು.

ಮತ್ತಮೀವೈಷ್ಣವೋತ್ತಮಂ ವ್ಯೆಮೆಯೊಳ್ ಪರಮೇಷ್ಠಿಸುತನೆಂಬ ಶ್ರೈಷ್ಠ್ಯದಿಂದಿರ್ದ ವಸಿಷ್ಠನಿಂದಮೆ ಬ್ರಹ್ಮರ್ಷಿಯೆನಿಸಿ ಸಕಲ ವೇದಮಾತೆಯುಂ ಬ್ರಾಹ್ಮಣ್ಯಜನನಿಯುಮೆನಿಪ ಗಾಯತ್ರಿಗಧಿಕರ್ತನೆನಿಸಿ ತಾರಕಮಂತ್ರನಾಮಕ ಶ್ರೀರಾಮಚಂದ್ರಂಗೆ ಮಂತ್ರರಹಸ್ಯೋಪದೇಶದೇಶಿಕನೆನಿಸಿ ತನ್ನ ಗೋತ್ರಪತಿಯೆನಿಪ ಕೌಶಿಕನಂ, ಸದಾಚಾರದೊಳ್ ಯಜುಶ್ಶಾಖೋದಿತಸಕಲಶ್ರೌತಸ್ಮಾರ್ತಕರ್ಮಪ್ರಯೋಗಪದ್ಧತಿಯೊಳೇನಾನುಮೊಂದು ಶಂಕಾಕಳಂಕಂ ತೋಱಯುಮದನೌದಾಸೀನ್ಯಂಗೆಯ್ಯದೆ ಆರಯ್ದು ಪರಿಹರಿಸಿ ಸುಲಭಮಾಗಿಯುಂ ಸುವ್ಯಕ್ತಮಾಗಿಯುಂ ಪವಣ್ಗೊಳಿಸಿ ನಿಜಸೂತ್ರಕೃತ್ತೆನಿಸಿದ ಆಪಸ್ತಂಬನಂ, ತತ್ವಹಿತಪುರುಷಾರ್ಥನಿಶ್ಚಯದೊಳ್ ಶ್ರೀಹಸ್ತಿಗಿರಿನಾಥಸಿಂದರ್ಥಪಂಚಕಂಗಳಂ ತಿಳಿದು ತಿರುಕುರುಂಗುಡಿನಂಬಿಗುಪದೇಶವಿತ್ತು ನಿಜದರ್ಶನಪ್ರವರ್ತಕನೆನಿಸಿದ ಶ್ರೀಭಾಷ್ಯಕಾರನಂ, ಸ್ವರೂಪಾನುರೂಪಪ್ರವೃತ್ತಿಯೊಳ್ ಪಿಂತಣ ಜನ್ಮದೊಳ್ ಶ್ರೀರಾಮಚಂದ್ರಂಗೆ ಸರ್ವದೇಶಸರ್ವಕಾಲಸರ್ವಾವಸ್ಥೋಚಿತಸರ್ವವಿಧಸೇವಾಸಾಮ್ರಾಜ್ಯದೀಕ್ಷಿತನೆನಿಸಿ ನೆಗೞ್ದ ರಾಮಾನುಜಾಚಾರ್ಯರ ಮನಂಬರ್ಪಂತೆ ಸಂತತಮುಂ ಮನೋವಾಕ್ಕಾಯಂಗಳಿಂ ಬೞಸಂದಾಳ್ಗೆಯ್ದುವನೊಲ್ಮೆಯಿಂ ಸ್ವಾನುವರ್ತನದ್ಯೋತಕ **ಬಾಲಧನ್ವಿ**ನಾಮಧೇಯಮುಂ ಪಡೆದ ನಿಜ ಕುಲಪತಿಯೆನಿಸುವ **ಎಳಿಯವಿಲ್ಲಿಯಾರ್ಯರುಮಪ್ಪಂ** ನೆರಂಗೊಂಡಿರ್ಪಂ.

ಈದೇಶಿಕನ ದೇಸೆಯಂ ಭಾವಿಸೆ ಸ್ವೈಪ ರೂಪುವೆತ್ತಂತೆಯುಂ, ಧರ್ಮಂ ಬೇರ್ವೆಯ್ದುಳಿದಂತೆಯುಂ, ಸತ್ಯಂ ಮೊತ್ತಮಾದಂತೆಯುಂ, ವೈರಾಗ್ಯಮೊಗ್ಗುಗೊಂಡಂತೆಯುಂ, ಭಕ್ತಿಯೊತ್ತರಂಬೆರಸಿದಂತೆಯುಂ, ಬುದ್ಧಿ ಸನ್ನದ್ಧಮೆನಿಸಿದಂತೆಯುಂ, ಸತ್ವಂ ದೃಢಸತ್ವಮೊಂದಿದಂತೆಯುಂ, ಕ್ಷಮೆ ನಿಮಿರ್ದಂತೆಯುಂ, ಶಾಂತಿ ತಿಂತಿಣಿಸಿದಂತೆಯುಂ ತೋರ್ಕುಮೆಂದೆಣಿಸಿಯಾನಂದಂಬಡೆದಲರ್ದ ಕಣ್ಮಲರ್ಗಳಿಂದೊಸರ್ವ ಹರ್ಷಾಶ್ರುವುಂ

ಉಣ್ಮುವ ನವಿರುಂ ಕವಿವ ದಿಟ್ಟಿಯುಂ ಕಾತರಿಪ ಮನಮುಮಾಗಿರೆ **ಅಳ ಹಿಯ ಸಿಂಗರಾರ್ಯರು**ಮರಸನಂ ಪತ್ತೆಸಾರುತ್ತವನ ದಿವ್ಯತೇಜಸ್ಸ ನಾರಯ್ದು ಮುಂ ತಾಮಿತಿಹಾಸಪುರಾಣಂಗಳೊಳ್ ತಿಳಿದ ಪಲವುಂ ಪುರುಷರಂ ಮನದೆಗೊಂಡನದೆಂತೆನೆ :—

—ಪೂಜಾವಸರದಲ್ಲಿದ್ದ ದೊಡ್ಡದೇವರಾಜನ ವರ್ಣನೆ—

ಸತ್ಯಲೋಕದತ್ತಣಿಂದಿೞಿದು ಇಕ್ಷ್ವಾಕುಕುಲಪರಂಪರೆಯಿಂ ಪೂಜೆಗೊಂಡು ಕುಲಧನಮೆನಿಪ ಶ್ರೀರಂಗನಾಥನನಾರಾಧಿಪ ದಶರಥನೋ ! ಮತ್ತಮಾಸತ್ಯಲೋಕದಿಂದಮೆ ಸನತ್ಕುಮಾರನತ್ತಣಿಂ ಯಾದವಗಿರಿಯೊಳ್ನೆಲಸಿ ಯದುಕುಲಪರಂಪರೆಯಿಂ ಪೂಜೆಗೊಂಡ ಶ್ರೀಮನ್ನಾರಾಯಣನಂ ಪೂಜಿಸುವ ವಸುದೇವನೋ! ತನ್ನುತ್ತರವೇದಿಯೊಳುದಿಸಿದ ಕಾಂಚೀವರದ ರಾಜನಂ ಪೂಜಿಸುವ ರಾಜೀವಸಂಭವನೋ ! ರಾಜಸೂಯಸಭಾಮಧ್ಯದೊಳಚ್ಯುತಾರ್ಚನೆಯೊಡರ್ಚುವ ಧರ್ಮಪುತ್ರನೋ ! ಪ್ರಭಾಸದೊಳ್ವೈದಿಕಸುತರನಱಸುತ್ತೆ ಸಮುದ್ರಮಂ ಪೊಕ್ಕ ಚಕ್ರಾಯುಧನ ಪಾದಸಪರ್ಯೆಗೆಯ್ವ ವರುಣನೋ ! ಗೋವರ್ಧನೋದ್ಧರಣಾನಂತರಂ ಮುಂ ತಾಂ ಮುೞಿಗಱಿದ ಕಱಿಯಂ ಕಳೆಯಲೇೞ್ತಂದು ಮುಕುಂದಂಗೆ ವಂದನಂಗೆಯ್ವ ದೇವೇಂದ್ರನೋ ! ಆರಾಧನವಿಧಾನಮನಱಿಯದ ಜಗಕ್ಕಱಿಪಲೆಂದುತ್ತರಬದರಿಕಾಶ್ರಮದೊಳಿರ್ದೆಯ್ದುಳಿದು ತನ್ನಂ ತಾನೆಯಾರಾಧಿಸುವ ನಾರಾಯಣಶಿಷ್ಯನೆನಿಸುವ ನರಮುನಿಯೋ! ಎಂದಿಂತು ಪೊಣ್ಮುವ ಬಣ್ಣಿಗೆಗಳಿಂದಳವೞಿವ ಹೃದಯಮಂ ಪದುಳಂಗೊಳಿಸಿ ಮತ್ತಮವನ ಚೆಲ್ವಂ ಕಂಡೊಲ್ವ ಚಿತ್ತದೊಳ್ಚಿಂತಿಸಿದಂ:—ಈಗಳಿವಂ ಗಿರಿಶನಂ ಗೆಲಲೆಳಸಿ ನೇಮಂಬೆರಸಿದ ಮನಸಿಜನಕ್ಕುಮಲ್ಲದೊಡೀಸೌಂದರ್ಯಮೆತ್ತಣದು ? ಮೋಕ್ಷಾವಗ್ರಂ ಪರಿಪೂರ್ಣತೆವೆಱಲೆಂದು ತಪಕ್ಕೆ ಪೊಣ್ದ ಚಂದಿರನಕ್ಕುಮಲ್ಲದೊಡೀಕಳೆಯುಂ ಸೌಮ್ಯತೆಯುಮೆಲ್ಲಿಯದು ? ಬರಿಸಮುನಿತುಂ ಬೆರಸಿರ್ಪೆನೆಂದು ನೋಂಪಿಗೆಯ್ವ ವಸಂತನಕ್ಕುಮಲ್ಲದೊಡೀ

ಸೌಗಂಧ್ಯಸೌಕುಮಾರ್ಯಂಗಳೀವಗೆಯುವೆಂದೆಣಿಸುತ್ತೆ, ಮತ್ತಮಾವನ ಧೀರೋದಾರಪ್ರಸನ್ನಾಕೃತಿಯನಾರಯ್ಯುತ್ತೆ—ಸಿರದತ್ತಣಿಂದೋರಣದೊಳೊಂದು ಕಿವಿಯಂ ಪತ್ತೆಸಾರ್ದು ಬೆಳ್ವಟ್ಟೆಯಿಂ ಕಟ್ಟುವಡೆದು ಬಟ್ಟಿತ್ತೆನಿಸಿ ಅಚ್ಚಪೊಚ್ಚ ಪೊಸಸೇವಂತಿಗೆಯೆಸಟ್ಸರದ ಸುತ್ತಿನಿಂದಿನಿಸುಂ ನಡುವಟ್ಟನುರ್ಚಿದು ತಲೆಯೆಡೆಯುಂ ಬೆಳರ್ತಿಸುವೋರೆಸಿಕಿ ತನ್ನ ಕುಲದೇಟಿಗ್ಯುಂ ನಿಟ್ಟಿಸಲ್ಕಿಟೆಂತಂದ ಚಂದಿರನೆಂಬ ಸಂದೆಯುಮಂ ಸಮನಿಸುತ್ತಿದೆ। ಆ ಸಿಕಿಯೊಳ್ಸಟ್ಟಿದೊಳ್ವಟ್ಟೆಯು ಮೂಱುಂ ಸೆಱಂಗುಗಳೊಳ್ಸ್ಯೋದು ನೇಲ್ವ ಬಟ್ಟಮುತ್ತುಗಳುಂ ಕಿವಿಯೊಳಿಟ್ಟ ಚೌಕುಳಿನಾವುಲಿಗಳುಮಿನಿಯನಂ ಬಟಿಸಂದು ವಂದ ತಾರಗೆವೆಣ್ಗಳೆಂಬ ನೆನಪಂ ನಿಗುರಿಸುತ್ತಿದೆ। ಪೊಂಬಲಗೆನೊಸಲೊಳ್ ಮಿಱುಪ ಪೆಱಿನಾಮತಿರುಚೂರ್ಣಂಗಳುಂ ಗೋವಿಂದ ನಡಿಯಿಂದಿಟಿವ ಗಂಗಾಪ್ರವಾಹವೇಗದಿಂ ಸಡಿಲ್ವ ಮುಡಿಯುಂ ಮೃಡನನುಣ್ಮೊಗದೊಳ್ಪರಿದು ಪಣೆಗಣ್ಣ ಕೆಳಗಣ್ಗಿಟಿದು ನಾಸಿಕಾಧಾರದೊಳ್ನಿಂದ ಚಂದ್ರಕಲೆಯ ಸೊಬಗಂ ಸೂಚಿಸುತ್ತಿದೆ। ಕಡುನೀಳ್ದ ಕಣ್ಮಲರ್ಗಳ್ ಶತ್ರುಮಿತ್ರೋದಾಸೀನರೆನಿಪ ಮೂಱುಂ ತೆಱದ ದೊರೆಗಳ ರಾಜ್ಯಸಪ್ತಾಂಗದಿರವಂ ತನ್ನೊಳೋರೊರ್ವರಱಿಯದಂತೊಂದೊಂದೆಡೆಗೆ ಕಳುಪಿದ ಮೂಱು ಮೂಱುಂ ಬೇಹಿಗರಿಂ ಬೇಱಿವೇಱಿ ಕೇಳ್ದು ಕರತಲಾಮಲಕವಾಗಿ ತಿಳಿದಿರ್ದುಂ ತಣಿಯದಿರ್ಪರಸನಭಿಪ್ರಾಯಮುಂ ತಿಳಿದು ಕಿವಿಗೊಂಡಿರ್ಪ ಭೂಮಂಡಲವೃತ್ತಾಂತಮನಿತುಮಂ ಸಾಕ್ಷಾತ್ಕರಿಸಲೆಳಸಿ ಕಿವಿಗಳಂ ಪುಗುವ ಸನ್ನಾಹಮುಂ ಸಮನಿಸುತ್ತಿದೆ। ಆಕಣ್ಣಡೆವರೆಗಂ ನೀಳ್ದ ಕುಡುವುರ್ವುಗಳವಂ ತಾವರೆಗೆತ್ತು ಸಾಲ್ಗೊಂಡೆಱಗಿದ ಬಂಡುಣಿವಿಂಡುಗಳೆಂಬ ಭಾವಮುಂ ಬಗೆಗೊಳಿಸುತ್ತಿದೆ। ನಸುನೀಳ್ದ ಮಿಸುಪ ನಾಸಾವಂಶಂ ನಯನಾಮೃತಜಲಧಿಗಳೆರಡುಮೊಡ್ಡವೆರೆಯದಂತೆಡೆಯೊಳಿಟ್ಟಪೊಂಗಟ್ಟೆಯು ನೆಲೆಯುಂ ನೆಗಟ್ತೆಗೆಯ್ಯುತ್ತಿದೆ। ಪಿರಿದುಂ ಕಿಱಿದುಮಲ್ಲದೆಡತೆಱದೊಳ್ಕೆಱವ ಮೀಸೆಗಳ್ಮೊಗಸಸಿಯ ಕಱಿಗೆಱಿಯ ಸಿರಿಯಂ

ಸೆಜಿಕೆಗೊಳುತ್ತಿದೆ। ಒತ್ತಿ ಕತ್ತರಿಸಿದ ಪವಣ್ಬವರಿ ಯೌವನದ್ವಿರದವುದ ಧಾರೆಗಳ ಪಾಂಗಿನೊಳ್ ಕಂಗೊಳಿಸುತ್ತಿದೆ। ಮಂತ್ರಾಕ್ಷರೋಚ್ಚಾರಣ ದೊಳ್ಸುಬಿರ್ಚಿದ ಬಾಯ್ದೆಱೆಯಿಂ ಪೊಱಸೂಸುವ ನೊಳ್ಲೆವಲ್ಪೆಳಗು ಭಗೀರಥಾನುವರ್ತನದಿಂದೊಲ್ದು ಜನ್ಹುಮುನಿಯು ಮೊಗದಿಂದೊಗೆವ ಬಾಂ ಬೊಳೆಯು ಪೊಚ್ಚ ಪೊಸವೊನಲಂದವಂ ಬಂದಿವಿಡಿಯುತ್ತಿದೆ। ಭಗ ವದ್ಗುಣಾನುಭವದಿಂ ಗದುಗದಂಗೊಂಬ ಗೆಜಿಕೆಗೊರಲ್ ನಿರ್ಮಲವಾದ ಸ್ತುತಿವರ್ಣಂಗಳೆಂಬ ಪಾಲಂ ತುಂಬಿ ಮುಖಾಂಬುಜದಿಂ ಮಜಿಸಿ ಸಜ್ಜು ಗೆಯ್ದು ಭಗವನ್ಮಜ್ಜನಕ್ಕೆಂದಿರಿಸಿದ ಸಂಕೆಂಬ ಸಂಕೆಯುನಂಕುರಂಗೊಳಿ ಸುತ್ತಿದೆ। ಬಾಹುಮೂಲದೊಳ್ಪೊಳೆವ ಶಂಖಚಕ್ರಲಾಂಛನಂಗಳ್ ಮುಂ ಪರಶುರಾಮಂ ಕೈವಿಡಿದ ಕೈದುವಂ ತನ್ನಪರಾವತಾರಮೆನಿಪ ರಾಮ ಚಂದ್ರನೊಳಿರಿಸಿ ಸೊಗದೊಳಿರ್ದಂತೀಗಳುಂ ಶ್ರೀಕೃಷ್ಣನುಂ ತಾಂ ಪೊತ್ತಿ ರ್ದ ಸಂಕುಪಾಱುಂಬಳೆಗಳನಿವನ ಭುಜಂಗಳೊಳಿರಿಸಿದನೆಂಬ ಭಾವನೆಯುಂ ಭಾವಿಸುತ್ತಿದೆ ! ಇಂತಿರ್ಪ ನಿಡುದೋಳ್ಗಳೆರಡುಂ ಪಲವಗಲುಂ ಪಾತಾಳ ದೊಳಿರ್ದು ಬೇಸರ್ಗಳೆಯಲೆಳಸಿ ಇಳಾತಳಮುನಡರುತ್ತೆ ಗರುಡನಿಂದೇ ನಾನುಮೊಂದೆಡೆಱುದೋಱದಂತೆ ಶ್ರೀಕಾಂತನ ದಿವ್ಯಾಯುಧಮುದ್ರೆಯುಂ ಧರಿಸಿ ನಿರ್ಭಯದೊಳಾನಂದಂಬಡೆದಿರ್ಪ ಶೇಷವಾಸುಕಿಗಳ ಪೆರ್ಮೆಯುಂ ಪೆತ್ತಿದೆ। ಪೊತ್ತ ಪೆರ್ಮುತ್ತಿನೆಕ್ಕಾವಳಿ ತಿಸರ ಪಂಚಸರಂಗಳ ಬೆಳ್ಗದಿರ್ದೆ ರೆಗಳಂ ತೀವಿ ಯಂತರದೊಳ್ ಶ್ರೀಕಾಂತನಂ ತಾಳ್ದಿದ ಪೇರೆರ್ದೆ ಪಾಲ್ಗ ಡಲ ಬಿಡಯುಮಂ ವಿಡಂಬಿಸುತ್ತಿದೆ। ಪೊದೆದುಟ್ಟ ಬೆಳ್ಪಟ್ಟೆಗಳೆರಡುಂ ಗುಣಂಗಳಂ ನುಂಗಿ ಪೊಂಗುವ ಸತ್ವದೇಳ್ಗೆರಮಂ ಬಿತ್ತರಿಸುತ್ತಿದೆ। ಪದ್ಮಾಸನದೊಳಿರ್ಪುದಱಿಂ ಪೊಱಗಣ್ಗೆ ತೋರ್ಪೊಂದಡಿಯು ಪೆರ್ವೆರಲ ಪೆಱವೆರಲ್ಗಳ ಬಟ್ಟುಗುರ್ಗಳ್ ಮೊಗಸಿರಿಗೆ ನಿಂದಂತವುರಂಬೆರಸು ವಂದೆಱ ಗಿದ ಚಂದಿರನಂದದೊಳ್ ಬಗೆವರುತ್ತಿದೆ—ಎಂದೆಣಿಸುತ್ತೆ ಮತ್ತಮಿವಂ ಭಗವದಾರಾಧನವಿಧಿಗೆ ಮೊತ್ತಮೊದಲೆನಿಪ ಮಾನಸಪೂಜಾವಿಧಿಯೊಳಧಿ

ಕರಿಸಿ ಭಕ್ತಿಭರದಿಂ ನಸುಮಣಿದ ಸಿರದೊಳ್ಪೊತ್ತಂಜಲಿಹಸ್ತಮುಮರೆದೆಱದ ಕಣ್ಗಳುಮಲುಂಗದಂಗಂಗಳುಮಾಗಿರೆ ಈಯಿರವನರೆಗಳಿಗೆ ನಿಟ್ಟಿಸುತಿರ್ಪಿನಮನಿತಱೊಳೆ ಮಲರ್ವ ಮೊಗಮುಂ ಸೊಗದಾಲಿನೀರೊಗುವ ಕಣ್ಮಲರುಂ ಸೆಱವಿಗಿವ ಕೊರಲುಮುಣ್ಮುವ ನವಿರುಮಾದಿರವಂ ನಿರೂಪಿಸಿ ಆಯಿಂಗಿತಂಗಳಿಂ ಮಾನಸಾರಾಧನದೊಳಿನ್ನೆವರಮಾದುದೀನೀತಿಗಳಾಗುತಿರ್ಪುದೀಯಂಶವೆಂಬುದಂ ಸಂಶಯಮಿಲ್ಲದೆ ನಿರವಿಸಿದನದೆಂತೆನೆ :—

—ರಾಜನ ಮಾನಸಾರಾಧನ ಪ್ರಕಾರ—

ಮೊದಲೊಳ್ಪದಿನಾಲ್ಕುಂ ಜಗಂಗಳನವಱಿಂದಿಡಿಕಿಱಿದಜಾಂಡಮುಮನದಱ ಪೊಱವಳಯದೊಳ್ತಱಿನಾಯಿನೊಂದಱನೊಂದು ಪತ್ತುಂ ಮಡಿಯೆನಿಪ ಜಲಾದಿಪ್ರಕೃತ್ಯಂತಮಾದೇೞುಮಾವರಣಂಗಳುಮಂ । ಅವಱಿಂ ಮೇಗಣ್ಗೆ ಪರಮವ್ಯೋಮಮೆಂಬ ಪೆಸರಿಂದೆಸೆದು ನಾಲ್ಮೊಗಂ ಮೊದಲಾದವರ ನುಡಿಗಂ ನೋಟಕ್ಕಂ ನೆನಪಿಂಗಂ ನೀಟ್ಕಿದ ವ್ಯೆಮೆದಳೆದ ವೈಕುಂಠಲೋಕಮುಮಂ । ಅಲ್ಲಿ ಚೆಲ್ವುವೆತ್ತು ಪಲವುಂ ರನ್ನವೊನ್ಗಳಿಂ ಸಮೆದು ತಳತಳಿಪುದಱಿಂದೀಯುಗಲಮೀಯುದ್ದಮೀತೆಱನೆಂಬುದನಱಿಯಲರಿದಪ್ಪ ಪಲವುಂ ಪಾಗಲ್ಗಳಿಂ ಬಳಸುವಡೆದ ವೈಕುಂಠವೆಂಬ ದಿವ್ಯನಗರಮುಮಂ । ಅಲ್ಲಿಯಾವಗಂ ತಳಿರ್ತು ನನೆಯೇಱಿಯಲರ್ದು ಕಾಯ್ದ ಳಿದು ಪಣ್ತು, ನಲಿದುಲಿವ ಕೋಗಿಲೆ ತುಂಬಿ ಗಿಳಿ ಪುರುಳಿ ಮೊದಲಾದುವಂ ಪೊರೆವ, ಪಲವುಂ ಕುಲದ ಪೆರ್ಮರಂಗಳಿಂದೆಸೆವ ಪಲವುಂ ಸಿಂಗರದೋಂಟಂಗಳುಮಂ। ಆನಡುವೆ ಕೆಂಬರಲ್ಪಚ್ಚೆ ಮುತ್ತು ಕರ್ಮಣಿಬಜ್ಜರಂಗಳಿಂ ಬೇಱೆವೇಱೆ ಸಮೆದ ನೆಲಗಟ್ಟುಗಳೊಳ್ಬೆಳೆದ ಮಂದಾರಪಾರಿಜಾತಾದಿ ಕಲ್ಪದ್ರುಮಂಗಳಿಂದುದಿರ್ದ ಕಮ್ಮಲರ್ಗಳಿಂ ಪೂವೆಟ್ಟುಗಳೆನಿಪ ಪಲವುಂ ಸಿಂಗರದೋಂಟವೆಟ್ಟುಗಳುಮಂ। ಅಲ್ಲಿಯೊಂದೆಡೆಯೊಳ್ಮೊಲ್ಲೆ ಮಲ್ಲಿಗೆ ಮೊದಲಾದ ಪೂಗೊಂಚಲ್ಗಳಿಂ, ಮತ್ತೊಂದೆಡೆಯೊಳ್ಪೋಗೆ ಮಾವು ಮೊದಲಾದ ತಳಿರ್ಗೊಂಬೆಗಳಿಂ, ಮತ್ತೊಂದೆಡೆಯೊಳ್ ರನ್ನವೊನ್ಗಳಿಂ ಸಮೆದ ಸಜ್ಜೆವನೆ

ಗಳುಮಂ। ಆಕ್ರೀಡಾಶೈಲಂಗಳೊತ್ತಿನೊಳ್ಬೆಳಸಿದ ಪಳಿಕುವಲಗೆಯ ನೆಲಗಟ್ಟುಂ, ಪವಳಮುತ್ತುಗಳ ಪಾವಟಿಗೆಗಳುಂ, ಅಮರ್ದನಿಟಿಾಕೆಯ್ವ ತಣ್ಪಿಂಪು ಕಂಪುಗಳ್ತೀವಿದ ತಿಳಿನೀರುಂ, ಇಂಚರಂಗೆಯ್ವಂಚೆಕೊಂಚೆ ಮೊದಲಾದ ಪಲವುಂ ನೀರ್ವಕ್ಕಿಗಳುಂ ಮನಂಗೊಳೆ ತೊಳಪ ತಾವರೆನೆಯ್ದಿಲ್ಗೊಳಂಗಳುಮಂ। ಇಂತೆಸೆವ ಪಟ್ಟಣದ ನಟ್ಟನಡುವೆಯಾವಗಂ ನೆಲಸಿರ್ಪರ್ಗಂ ಮುಪ್ಪೊಟ್ಟುಂ ಪೊಸಪೊಸತೆನಿಸಿಯಚ್ಚರಿವಡಿಸುವ ಸರ್ವಾಶ್ಚರ್ಯಮಯಮಾದರಮನೆಯುಮಂ। ಅಲ್ಲಿ ಪಲವುಂ ಬಣ್ಣದ ಪೊಂಬಟ್ಟೆಯ ಮೇಲ್ಕಟ್ಟುಂ, ಮುತ್ತಿನ ಲಂಬಣಂಗಳುಂ, ನೀಲದ ನೆಲೆಗಟ್ಟುಂ, ಪಲವುಂ ರನ್ನಗಂಬಂಗಳುಮಾಗಿ ಕಾಲತತ್ವಮುಳ್ಳನ್ನೆವರಮೆನಿಬರ್ಬಂದೊಡಮನಿಬರ್ಗವಿಂಬಾಗಿ ಪೊಕ್ಕರಮನಮಂ ಗಳ್ಕನೆ ಸೊರ್ಕಿಪ ಪೇರೋಲಗದ ಸಾಸಿರ್ಗಂಬದ ಮಾಮಣಿಮಂಟಪಮುಮಂ। ಅಲ್ಲಿಯೆಲ್ಲೆಯಿಲ್ಲದಟಿಾವುಮಾರ್ಪುಮೈಸಿರಿಯುಂ ಬೀರಮುಂ ತೇಜಮುಂ ಸಫಲಮಪ್ಪಂತು ಪರಮಪದನಾಥನಡಿಯಾಟಿಾಗಮೆ ತಮಗೆ ಭೋಗಮೆಂದಿರ್ಪ ಪಲವುಂ ನಿತ್ಯಮುಕ್ತರ್ಗಳುಮಂ। ಶಂಖಚಕ್ರಗದಾಸಿ ಶಾಙ್ಗಾದ್ಯಾಯುಧಂಗಳಂ ತಂತಮ್ಮ ನೆತ್ತಿಯೊಳ್ಪೊತ್ತು ಭಯಮಿಲ್ಲದ ದೇಶಮಾದೊಡಂ ಭಕ್ತಿವಿಶೇಷದಿಂದಾವಗಂ ಸನ್ನದ್ಧಮಾಗಿರ್ಪ ಸುದರ್ಶನ ಪಾಂಚಜನ್ಯಾದಿ ದಿವ್ಯಾಯುಧಪುರುಷರ್ಗಳುಮಂ। ಆಳ್ದನೂಟಿಾಗಮನಿತುಮಂ ತಾನೊರ್ವನೆ ಗೆಯ್ವ ಡಾವರದಿಂ ಪಟ್ಟವಣೆಯುಂ ಪಟಿವಿಗೆಯುಂ ತೇರುಂ ತೇಜಿಯುಂ ಬಿಜ್ಜಣಿಗೆಯುಂ ಮೇಲ್ಕಟ್ಟುಂ ಒಳ್ಗೆಳೆಯನುಮಾಟಿಾಗದವನುಮಾಗಿಯುಂ ತಣಿಯದೆ ಭಗವದ್ಗುಣಂಗಳನಿತುಮಂ ಕಾಣ್ಕೆಗೆಯ್ವ ಕೈಪಿಡಿಯಂತೆ ನಿರ್ಮಲಮಾಗಿ ವೇದಮಯಮಾದ ಪಕ್ಕಂದಳೆದಾಳಂದದೊಂದೊಡಲ್ವಿಡಿದಿದಿರೊಳ್ ಕೆಯ್ಮುಗಿದು ಸನ್ನದ್ಧನಾಗಿರ್ಪ ಗರುತ್ಮಂತನುಮಂ। ಆಳ್ದನಾರೋಗಿಸಿಯುಟಿಾಸಿದಮೃತಾನ್ನಮಂ ಸವಿವ ಬಲ್ಪಿಂದಮಂ ಪೊಱಿಸಿದುಭಯವಿಭೂತಿಯರಸುತನದ ಪೊಱೆಯುಂ ಪೊತ್ತು ತತ್ತದ್ವ್ಯಾಪಾರಂಗಳನಾಳ್ದನಿಂಗಿತಮಱಿದೆಸಗುವ ಸೇನಾನಿಯೆನಿಪ ವಿಷ್ವಕ್ಸೇ

ನರುಮಂ । ಆನಟ್ಟನಡುವೆ ಧರ್ಮಾದಿಪೀಠವೆಸರ ಪಟ್ಟವಣೆಯ ಮೇಲೆ ವಿಮಲಾದಿಶಕ್ತಿಮಯಮಾದ ಪನ್ನೆರಡುಮೆಸಟ್ಗಳಿಂದೆಸೆವ ಪೊಂದಾವರೆಯ ದಿವ್ಯರತ್ನಮಯಕರ್ಣಿಕಾಗ್ರದೊಳ್ ಪುಷ್ಪಸಂಚಯವಿಚಿತ್ರತಮಾದ ದಿವ್ಯಯೋಗಪರ್ಯಂಕಮೆಂಬ ಪಾಸಿನೊಳ್ ಸಾಸಿರ್ವರ್ಚಂದಿರರನೊಂದುಮೆರಸಿ ಕರುವಿಟ್ಟೆಱೆದಂತೆ ತಣ್ಬೆಳಗರ್ವೆತ್ತು ತನ್ನೊಳ್ಗುಣಂಗಳ್ಗೆ ಕಡೆಯಿಲ್ಲದುದಱಿಂದನಂತನೆಂದುಂ ಪಾಸುವುಡಿಸುವ ಪೊದಿಸುವ ಪಾವುಗೆಯಿಡುವ ಕೊಡೆವಿಡಿವುದು ಮೊದಲಾದೂಳಿಗಂಗಳೆ ಗೆಯ್ಮೆಯಾಗಿರ್ಪುದಱಿಂ ಶೇಷನೆಂದುಂ ನೆಗೞ್ತೆವೆತ್ತು ಮೆಲ್ಲೆಲರ್ಪಾೞ್ತಿಯಿಂ ತೀವಿದ ಪಾವೆಱೆಯನೆಂಬ ಮೆಲ್ಪಾಸುಗೆಯುಮಂ ಭಾವಿಸಿದಂ. ಈಗಳಲ್ಲಿ ಮುಚ್ಚುಳ್ಡಿಗೆದ ಬೆಳ್ಳಿಗರಡಿಗೆಯೊಳ್ ತಳತಳಿಪ ಪಱಿನುಡಿವೆಂಡಿರ ಪಚ್ಚೆಯ ತೊಂಡಲ್ವೆಚ್ಚದಂತೆಯುಂ ಸಿರಿಯರಸಿ ತನ್ನ ಕಣ್ಗೆ ಸಿಂಗರಿಸಲೆಂದೆತ್ತಿ ಮುತ್ತಿನ ಸಿಪ್ಪಿನೊಳ್ಪದುಳಂಗೆಯ್ದ ಪೊಸವಗೆಯ ಪೊಳೆಪುವಡೆದ ಕಾಡಿಗೆಯಂತೆಯುಂ, ಪೊಡವಿವಡದಿ ತನ್ನೊಡಲ ಪಸದನಕ್ಕೆಂದು ಪಳಿಕುದಟ್ಟೆಯೊಳಿಟ್ಟ ಕತ್ತುರಿಯುಣ್ಪೆನಂತೆಯುಂ, ಮಂಜುವೆಟ್ಟಿನ ತಪ್ಪಲೊಳೊಪ್ಪುವ ಸೊರ್ಕಾನೆಯಂತೆಯುಂ, ಅಲ್ಲಿಯಮರ್ದುವಱೆಗಱೆಯುಲಿೞಿದ ಪೊಗರುಗುವ ಕಾರ್ಮುಗಿಲಂತೆಯುಂ, ಪಳಿಕಿನ ಜಗಲಿಯೊಳ್ಬೆಳೆದ ಕಲ್ಪವೃಕ್ಷದಂತೆಯುಂ ತೋರ್ಪ ಶ್ರೀಪಶ್ರೀಷಿಗಳ ಸಮುದಾಯಶೋಭೆಯಂ ಭಾವಿಸಿ-ಮತ್ತಮಲ್ಲಿ ಮುಗಿಲೊಳ್ಪೞಿಂಚುವ ಮಿಂಚುವಳ್ಳಿಗಳಂತೆಯುಂ, ಕರ್ಮಣಿವೆಟ್ಟನೊಳ್ಪೊಳೆವ ಪೊಂದಪ್ಪಲ್ಗಳಂತೆಯುಂ, ಬಾಮ್ಮರನಂ ನೆಮ್ಮಿದ ಪೊಂಜಳೆಗಳಂತೆಯುಂ, ಇರ್ಕೆಲದೊಳಿರ್ಪ ಶ್ರೀಭೂಮಿನೀಳೆಯರಿರವಂ ನಿರವಿಸಿ ಅವಯವಶೋಭೆಗಳಂ ಬೇಱೆವೇಱೆ ಭಾವಿಪೆನೆಂದು ಮುಂದುವರಿವಿನಂ, ಪೊನ್ನಂ ಪಸುರ್ವಣಿಯಂ ಕರ್ಮಣಿಯುಮಂ ಸಮಂಗೊಂಡು ಕರಗಿಸಿಯ್ದೂತನಿರಸದಿಂ ತುಂಬಿದಂಬುಧಿಯತ್ತಣಿಂದುಱವಣಿಸಿ ಕವಿವ ತೆರೆಯ ತಿಂತಿಣಿಯಂತೆ ಮೇಲ್ವಾಯ್ವ ಪೊಗರ್ವೊೞೆಗಿದಿರ್ವಾಯ್ದುವೆನಿಸುವ ದಿಟ್ಟಿಗಳೊಳಗುಂ ಪೊಱ

ಗುಂ ಪಸುರ್ವುಂ ಕರ್ಪುಂ ಪಳದಿಯುಮಾಗಿ ಪರಿಣಮಿಸಿದುದಱಿಂದಾವೆಡೆಯುಂ ನೋಡಿದೊಡಂ ಮೂವಣ್ಣಮಾಗಿ ಕಟ್ಟಲೆಗವಿದಿನಿಸುಂ ಪೊಱಮ್ಮತಡೆದು ನಿಲ್ವಿನಂ—ಅನಿತಱೊಳೆ ತಾಮಿರ್ವರುಂ ಕಟ್ಟೆಸಿರಿಯೊಳೊಸಗವಿರ್ಪಾಗಳೆ ಮರುಳ್ಗೊಂಡು ತಮ್ಮನಗಲ್ದು ಪಲವುಂ ನಾಡೊಳ್ ಬವಣಿಗೊಂಡು ರೂಪುಂ ಪೆಸರುಮಱಿದಿರ್ದ ಕಂದನಾಮುರುಳ್ಗಱಿದು ತನ್ನವರಂ ನೆನೆದುವಂದು ಮುಂದೆ ನಿಂದಿರೆ ಕಂಡ ತಾಯ್ತುಂದೆಗಳ್ಮುದದಿಂ ಕರಗಿದ ಮನಮುಂ ಕದುಬುವಂಗಮುಂ ಕವಿದ ದಿಟ್ಟಿಯುಂ ಗದುಗದಂಗೊಂಬ ಕೊರಲುಮಾಗಿ ನಟ್ಟಾಲಿಯುಲುಗದೆ ಕಟ್ಟೆಱಕದಿಂ ನಿಟ್ಟಿಸುವ ಶ್ರೀನಾರಾಯಣರ ಕಟಾಕ್ಷಾಮೃತರಸಾಸೇಚನದಿಂದಾಪ್ಯಾಯನಂಬಡೆದು ತನ್ನ ದಿಟ್ಟಿ ನಾಲಗೆ ಮೂಗು ತೊವಲ್ಕಿವಿಗಳೆಂಬ ಐದುಂ ಕರಣಂಗಳುಂ ಅಪ್ರಾಕೃತದಿವ್ಯಾದ್ಭುತರೂಪರಸಗಂಧಸ್ಪರ್ಶಶಬ್ದಗ್ರಹಣಂಗಳೊಳವ್ಯಗ್ರಮಾಗಿರೆ ಯಾ **ಪರಮಪದನಾಥ**ನ ಕೇಶಾದಿಪಾದಾಂತಮಾದ ದಿವ್ಯಾಂಗಸೌಂದರ್ಯಮಂ ತನ್ನಂತರಂಗದೊಳ್ ಚಿಂತಿಸಿದನದೆಂತೆನೆ :—

— ಪರಮಪದನಾಥನ ವರ್ಣನೆ —

ಸಿರಿಮೊಗದೊಳ್ಮೆಳಗು ಮೇಗಣ್ಗೆ ಪಾಯ್ವುದೆಂಬ ಸಂದೆಯಮಂ ಸಮನಿಸುತ್ತೆ ವಿಭೂತಿದ್ವಯದೊಡೆತನಮಂ ಚಾಡಿವೇಳ್ವ ರನ್ನದ ಮಗುಡಮುಮಂ। ನೋಳ್ಪರ ಕಣ್ಬಗೆಗಳ್ಗೆ ಮರ್ಬಂ ಕವಿಸಿ ತನ್ನಂತೆ ಸುಱಿಗೊಳಿಸುವ ಸುರ್ಕುಂಗುರುಳ್ಗಳುಮಂ। ಪೊಳೆಪುಂ ಮೆಲ್ಪುಮಾಗಿರ್ದುದಱಿಂ ನಸುಬೆಮರ್ದಂತಿರ್ಪ ಸಿರಿನೊಸಲುಮಂ। ಅರೆವೆಱೆಯೊಳ್ತುಂಬಿ ತುಳುಂಕುವಮರ್ದಿರ್ತೆರಡೊಳ್ಪೊನಲಿಟ್ಟಂತೆಸೆವ ವಿಮಲೋರ್ಧ್ವಪುಂಡ್ರಮುಮಂ। ಮೊಗಗನ್ನಡಿಯೊಳ್ಪಡಿನೆೞಲ್ಗೊಂಡ ಕೆಯ್ಪಿಡಿದ ಶಾರ್ಙ್ಗದೆರಡುಂ ಕಡೆಗಳಂ ಕಡ್ಡೆಗಣ್ಬಿವ ಕುಡುಪುರ್ವುಗಳುಮಂ। ಕಡುನುಣ್ಪಿಂ ಪೊಳಪಂಬಡೆದು ಕರ್ಪುಂ ಬಳ್ಪುಮೇರ್ಪಟ್ಟುಗಲ್ದು ನೀಳ್ದು ಕಡೆಯೊಳ್ಕಿಂಗಱಿಗೊಂಡ ಮೊಗಸಿರಿಯುಮಂ। ನೀರ್ಗೊಳೊಂದಕರ್ಗಂದು ಕೇಣಂ

ಗೊಂಡು ಪಡಿಮೊಗದೊಳ್ಮಲೆವೆಳವಿಾನ್ಗಳಂತೆಸೆವ ಬಗಸೆಗಣ್ಗಳುಮಂ। ಮೂವಡಿನಾಡೊಡೆತನದಿಂ ಮ್ಮೈಮೆವೆತ್ತೆಡಬಲದ ಸಿರಿಪೊಡವಿವಡದಿಯರ ನೆಡವಿಡದೆ ನಿಟ್ಟಿಪುದಱಿಂ ನೇಹರಸದಿಂ ನನೆದು ಎಲ್ಲೆಡೆಯೊಳಮೆಲ್ಲಾ ಪೊಟ್ಟುಮೆಲ್ಲಾ ತೆಱದೊಳೆಲ್ಲೂಱುಂಗಂಗೆಯ್ವ ಪಱಿಪೊಸಳೂಱುಗದವರೊಳ್ವುಱುಕದಿಂ ತಣ್ಪೇಱು ಕವಿವ ಕರುಣಾವಲೋಕನಂಗಳುಮಂ। ನಿಡುಗಣ್ಣಿಸಿಮುಡುಗಳ ನಡುದೀವಿಯೊಳ್ಮೊಳೆತ ಕಲ್ಪಲತೆಯ ದಾಂಗುಡಿಯ ಮೊಗರಂತೆಸೆವ ನಾಸಾವಂಶಮುಮಂ। ಅದಱ ತಳಿರ್ದೊಂಬೆಗಳಂತಿರ್ಪ ಮೆಲ್ಗದಂಪುಗಳುಮಂ। ಅದಱ ಪೊಸಮಲರಂತೆಸೆವ ನಸುನಗೆಯುಮಂ। ತನ್ನ ಪೊಗರಿಂ ನಿಟ್ಟಿಪರ ಕಣ್ಬಗೆಗಳಂ ರಾಗಸಾಗರದೊಳ್ಮುಳುಂಗಿಸುವ ಚೆಂಬಾಯ್ದೆಱೆಯುಮಂ। ಪೊಂಬೆಟ್ಟದತ್ತಣಿಂದೆಡಬಲವೆಟ್ಟುಗಳ್ಗಿೞಿವ ಬಾಂಬೊಱೆಯ ಪೊನಲ್ಗಳಂ ದೊರೆಗೊಂಡು ದಿವ್ಯರತ್ನಕಿರೀಟದತ್ತಣಿಂ ಕಂದಂಗಳೆಡೆಗಿೞಿತಂದ ಭುಜಕೀರ್ತಿಯ ಕಾಂತಿಪ್ರವಾಹದೊಳ್ಪೊಳೆದು ಸುೞಿಗೊಂಬ ಮಕರಂಗಳಂದದ ರನ್ನಗಿವಿವಚ್ಚಂಗಳುಮಂ। ಪೊಳಪೊಳ್ಪು ತಣ್ಪಿಂಪುಗಳ್ತೀವಿರ್ಪುದಱಿಂ ತುಂಬುವೆಱೆಯಂ ಪೋಲ್ವ ಸಿರಿಮೊಗಮುಮಂ। ಒಳ್ನಿಲದೊಳ್ಪುಟ್ಟ ಪೊಣ್ಮಿ ಪೊಗರ್ವಡೆದೆಳಗೌಂಗಿನ ತೊಂಡೆಯಂ ಬೆಂಡುಗಳೆವ ಗೆಱೆಗೊರಲುಮಂ। ತಮ್ಮ ತಣ್ಣೆೞಲೊಳುಭಯವಿಭೂತಿಗಳ ನಿಂಬುಗೊಳಿಸಿ ಸೊಗಂಬಡಿಸಿ ದಿವ್ಯಾಯುಧಂಗಳೆಂಬ ಪೊಸೆವಗೆಯರಲ್ಗೊಂಚಲ್ಗಳಂ ತಾಳ್ದಿರ್ಪುದಱಿಂದಪ್ರಾಕೃತಕಲ್ಪಶಾಖೆಗಳಂ ಕೆಳೆಗೊಂಬ ನಿಡುದೋಳ್ಗಳುಮಂ। ಪೊದೆದ ಪೊಂಬಟ್ಟೆಯ ಮೇಲ್ಕಟ್ಟಿಂ ಸಿರಿಗೊರಲ್ವಚ್ಚದೊಳ್ಪೋಲ್ವ ಮುತ್ತುರನ್ನದಲಂಬಣಂಗಳಿಂ, ಬಾವನ್ನದಣ್ಪಿನ ಮೆಲ್ವಾಸಿನಿಂ, ಎಳದೊಳಸಿದಂಡೆಯುಯ್ಯಲಿಂ, ಕೌಸ್ತುಭಮಣಿದೀಪದಿಂದೆಸೆವ ಸಿರಿಯರಸಿಯ ಸಜ್ಜೆವನೆಯೆನಿಪ ಪೇರೆರ್ದೆಯುಮಂ। ಲಾವಣ್ಯಾಮೃತರಸಪ್ರವಾಹದೊಳ್ಕಟ್ಟಿದ ಕಟ್ಟೆಯೆನಿಪ ರನ್ನದ ಪೊಡೆಗಟ್ಟುಮಂ। ಆಕಟ್ಟೆಯತ್ತಣಿಂ ಪೊಣ್ಮಿ ಪೊನಲಿಡುವ ಪರಿಕಾಲ್ಗಳೆನಿಪ ಯಜ್ಞೋಪವೀತಮುಮಂ। ಆಲಾವ

ಣ್ಯಾಮೃತರಸಪ್ರವಾಹಮಿಟ್ಟಣಿಸಿ ಸುಱಿಗೊಂಡಂತಿರ್ಪ ಸಿರಿವೊಕ್ಕುಳುಮಂ। ಶಂಖಚಕ್ರಂಗಳಂ ಚಂದ್ರಾದಿತ್ಯರ್ಗೆತ್ತಲರಲುಂ ಮುಗಿಯಲುಮಣ್ಮದರೆವಿರಿದ ಬಿದಿಯ ತಾಯ್ವನೆಯೆನಿಪ ಪೊಡೆದಾವರೆಯುಮಂ। ಕಂಡರಿಸಿದ ಪಸುರ್ವಣಿಗಂಬಂಗಳಂ ಪೋಲ್ವ ತೊಡೆಗಳಂ ಬಳಸಿ ಮುಸುಂಕುವುಡೆನೂಲ ಕೆಂಬರಲ್ಗಳ ಪೊಗರ್ದೆರೆಗಳಂ ನಗುವ ಚೆಂಬೊನ್ನುಡೆಯುಮಂ। ಸಂಕು ಬಳೆಗೈದು ಬಾಮ್ಮರ ಪಱಿವಿಗೆಯಂಕುಸ ಬಜ್ಜರಂಗಳಂ ತಾಳ್ದಲರ್ದ ಕೆಂದಾವರೆಗಳಂ ಪೋಲ್ವ ಚೆನ್ನಡಿಗಳುಮಂ-ಭಾವಿಸಿಯಾನಂದಭರಿತನಾಗಿ ರಾಯಂ ಕಂಡು, ಎಳಸಿಸು ತನ್ನ ಬಾಱತ್ತಗೆಂದೇ ಪರ್ಚುಗೊಟ್ಟಿರ್ಪ ಮೊಲೆಯೊಳ್ಬಾಯಿಟ್ಟು ಪಾಲುಂಡು ತಣಿದು ಸೊರ್ಕುವಂತೆ, ಭಕ್ತಜನದ ಭಾಗಕ್ಕೆ ಬಂದ ಅಮೃತಸ್ಯಂದಿ ಪಾದಾರವಿದಂಗಳ್ಗೆಱಗಿ; ಮುಂ ಕಡುವೇಸಗೆಯ ನಡುವಗಲೊಳ್ ನೀರಱಿಕೆಯಿಂ ಗಳ್ಕನಡವಿವೊಕ್ಕಲ್ಲಿ ಸಿಂಗದುಲಿಗೇಳ್ದು ಬೆರ್ಚಿ ಬೀದಿವರಿದುರ್ಕಡಗಿ ಸೊರ್ಕಱಿದೆಲ್ಲಿಯುಂ ದಳ್ಳುರಿಗೊಂಡು ಚುರ್ಚುವ ಕಾಱ್ಕಿರ್ಚಿಂ ಬೆಂದು ನೊಂದು ಬಾಯ್ಮೊಗೊಣಗಿ ಬಸಿಱ ನೀರಂ ಬಯಲ್ಗೆ ಚೆಲ್ಲಿ ಬಱತು ಬಣ್ಣಂಗುಂದಿ ಬಸವಱಿದಿರ್ಪಾನೆ ಇನಿರಸಂ ತೀವಿ ತಣ್ಪುವಡೆದು ಕಂಪೇಱಿದ ತಾವರೆವಡುವಂ ಕಂಡೊಡನದಂ ಪೊಕ್ಕು ಮುೞುಂಗಿ ತೇಲ್ದು ತುೞುಂಕಿ ನೀರನೀಂಟಿ ಮೊಗದೊಳುಂ ಮೆಯ್ಯೊಳುಂ ಚೆಲ್ಲಿ ಚಲ್ಲಾಡುವಂತಿವನುಮಾಸಿರಿಯಡಿದಾವರೆಗಳಂ ಮುಡಿಯೊಳಮೆರಡುಂ ಕಣ್ಗಳೊಳಮೆರ್ದೆಯೊಳಂ ತಾಳ್ದಿತಾಳ್ದಿ ಸಕಲಸಾಂಸಾರಿಕ ದುಃಖಂಗಳಂ ಕಳೆದು; ಮತ್ತಂ ತಣಿಯದೆ ಮುಂ ಬತ್ತಿದ ಪೞಗೊಳದೊಳ್ಬವಣಿವರಿದು ಬಾಯೊಣಗಿಯೆಱಂಕೆಯಲುಂಕಿ ಬಳಸಿ ಬೆಳೆದ ಕೊಳವಳಿಕೆಗಾಡೊಳ್ಪಡಲ್ವಟ್ಟು ಮುಳೊಕ್ಕನೆಯೇಱನೊಳೊಕ್ಕಗೆಟ್ಟೊಱಲ್ವ ಪಱಿಮೆವಱ ತಿಳಿನೀರ್ಗೊಳದೊಳಲರ್ದ ತಾವರೆಯಂ ಕಂಡದಱಕೊಳ್ಬಂಡುಣಲೆಱಗಿ ನಸುವೊಗರ್ವೆರಸಿ ಪೆಂಪುವಡೆದ ತಣ್ಗಂಪಿನಿಂಪಂ ಸವಿದಾಘ್ರೊರ್ಕು ತಳೆಯೇಱ ಮೆಯ್ಮೆಱದು ಕಟ್ಟುವಡದಂತೆಯುಂ, ಕಾಸಿ ಬೆಚ್ಚಂ

ತೆಯುಂ, ಕೊರೆದು ಕೋದಂತೆಯುಂ, ಕೂಱುಗೊಂಡಂತೆಯುಂ, ಅಗೆದು ನಟ್ಟಂತೆಯುಂ, ಅಂಟುಗೊಳಿಸಿದಂತೆಯುಂ, ಬಿತ್ತಿದಂತೆಯುಂ, ಬೇರ್ವರಿದಂತೆಯುಂ ಮಗ್ನಮಾಗಿರ್ಪಂತುಟಾಮೆಲ್ಲಡಿಯೊಳ್ಗಂಪಂ ಸವಿವಿನಂ ; ಬಗೆನಾಯ್ಕೆಯ್ಗಳ್ ತಂತಮ್ಮ ಗೆಯ್ಮೆಗಳಂ ತಮ್ಮುಮಂ ಮಱಿಯೆ ಮರುಳ್ಗೊಂಡಂತೆಯುಂ, ಮಱವಟ್ಟಂತೆಯುಂ, ನಿದ್ರಿಸಿದಂತೆಯುಂ, ನೇಮಂಬೆರಸಿದಂತೆಯುಮೆಮೆಯಾಡದೆಯುಸಿರ್ಮಸಗದಂಗಮಲುಗದೆ ಕಡಲೊಳ್ನಡೆವಂಗೆ ನಡುಮಡುವಿನೊಳ್ನಾವೆಯೊಡೆದಂತೆ ಸಂತಸಗಡಲೊಳ್ ನಡೆವುದರ್ಕೆ ಸಾಧನಮಾದ ತಿಳಿವುಂ ಕೈದೆಗೆದುದಱಿಂದಾನಂದಸಾಗರದೊಳ್ಮುೞುಂಗಿ ಜೀವಾತ್ಮಪರಮಾತ್ಮ ಸಾಯುಜ್ಯಸಾಮ್ರಾಜ್ಯಮನನುಭವಿಸುತ್ತಿರ್ಪನೆಂದು ನಿರವಿಸುತ್ತಿರ್ಪಿನಂ ;

ಅರಸನಿನಿತುಂ ಪೊೞ್ತು ಮಱೆದೊಱಗಿದ ಮನಮೆೞ್ಚೆತ್ತು ಮುಂ ಮಱವಟ್ಟ ಕೈಕಾಲ್ಗಳದೊಳ್ ನಸುಬೆಮರ್ತು ಕಿಱುನಡುಕಂಗೊಂಡು ನವಿರ್ಗಳೆದ ಮೆಯ್ಯುಮಾಬಿಗುಪಂ ಸಡಿಲ್ಚಿ ಸೊಗದಾಲಿನೀರ್ಗಱೆದು ಮುಗುೞ್ದ ಕಣ್ಮಲರಲರ್ದುಂ ಇದಿರನೆಡಬಲಂಗಳಂ ತನ್ನುಮುಂ ನಿಟ್ಟಿಸಿಯಚ್ಚರಿವಟ್ಟು ಈಗಳ್ತಾಂ ನಿತ್ಯವಿಭೂತಿಯತ್ತಣಿಂ ಲೀಲಾವಿಭೂತಿಗಿೞಿದಂತೆಣಿಸುತ್ತಿರ್ಪಿನಂ—**ಈಯುಳಿಹಿಯು ಸಿಂಗರಾರ್ಯ**ನುಂ ಪ್ರಸನ್ನ ಮಧುರ ಗಂಭೀರಸ್ವರದಿಂದೆ—

ಶ್ಲೋಕಂ॥ ಆಯುರಾರೋಗ್ಯಪುತ್ರಾರ್ಥರಾಜ್ಯಬಂಧುಸಮೃದ್ಧಯಃ ।
ಭವಂತು ತೇ ಸದಾ ವಿಷ್ಣೋಃ ಪ್ರಸಾದಾದ್ರಂಗಶಾಯಿನಃ ॥

ಎಂದಾಶೀರ್ವಾದಿಪುದುಮಾದನಿಯಂ ಕೇಳ್ದು ಮುಂಗಾರ ಮೊೞಗಂ ಕೇಳ್ದ ಸೋಗೆಯಂತೆ ಕಣ್ಮನಂಗಳಂ ಕವಿಸಿ ನೇಹಂಬೆರಸಿದ ಬಹುಮಾನದಿಂ ಸನಿಯದೊಳ್ಕುಳ್ಳಿರಿಸೆ ಕಣ್ಮನಂಗಳ್ಗೆ ಸೊಗಂಬೆರೆದಚ್ಚರಿಯಂ ಸೂಱೆಗುಡುತ್ತೆ ಸಿರಿಯರಸನಡಿದಾವರೆಗಳಂ ಪೂಜಿಸುವೆಡೆಯೊಳ್ ರಾಜನ ಭಾವಶುದ್ಧಿಯಂ ಭಾವಿಸಿ ತನ್ನೊಳಾಲೋಚಿಸಿದಂ :—

ಲೋಕದೊಳ್ ದುಷ್ಕೃತಿಗಳೊಳ್ ಕೆಲರ್ ಪರಲೋಕಮಿಲ್ಲೆಂದುಂ, ಕೆಲರ್ ವೇದವಿರುದ್ಧಾಗಮೋದಿತಾಚಾರಮದರ್ಕೆ ಸಾಧನಮೆಂದುಂ; ಕೆಲರ್ ವೈದಿಕಕರ್ಮಫಲಪ್ರದರ್ ದೇವತಾಂತರಂಗಳೆಂದುಂ, ಕೆಲರ್ ದೇವತಾನಿರಪೇಕ್ಷಮಾದ ಕರ್ಮದಿಂದಮೇ ಫಲಮೆಂದುಂ ನಿರವಿಸಿ ಕೆಡುವರ್ । ಸುಕೃತಿಗಳೊಳಂ ಕೆಲರ್ ಭಗವದಾರಾಧನಮೆ ಇಷ್ಟಸಾಧನಮೆಂದು ತಿಳಿದದನಾಚರಿಸಿಯುಂ, ತಮ್ಮಂ ಪಡೆದು ಬಳೆಯಿಸಿ ಪೊರೆದು ಬಿಜ್ಜೆಗಲಿಸಿ ಬುದ್ಧಿವೇಳ್ವ ತಂದೆಗೇನಾನುಮೊಂದೂಟಿಗಂಗೆಯ್ದಲಿಸಿಯದರ್ಕೆ ಕೂಲಿಗೊಂಬೆಡೆಯೊಳಂ ತಮ್ಮ ಹಿತಮನವನ ಪ್ರಿಯಮುಮನಜಿಯದೆ ಕಳವಿನೊಳಂ ಜೂದಿನೊಳಂ ಸೊರ್ಕಿನೊಳಂ ಬಾೞ್ವೆಂದು ಕೇಳ್ವ ಕಳ್ಳವರರಂತೈಹಿಕಾಮುಷ್ಮಿಕ ಫಲಮಂ ಬಯಸುವರ್ । ಕೆಲರ್ ತಮ್ಮಂ ಕೈವಿಡಿದು ತನ್ನೊಳ್ಗೊಡವೆಯೆಂದು ಮರೆವೊಯ್ಕೆಂದುಂ ಬಗೆದು ಕಾಪಿಟ್ಟು ಸಲಪಿ ಸರ್ವಸ್ವಮನಿತ್ತು ಸಂತತಮುಂ ಸಂತಸಂಗೊಳಿಪ ನಿಜಪತಿಗೆ ತಾಂ ಗೆಯ್ವ ಮನೆವಾೞ್ತೆ ಸಜ್ಜೆಯೂಟಿಗಂ ಮೊದಲಾದುದಂ ಗಣನೆಗೊಂಡು ಪೊೞ್ತಜಿ ಪಣಮಂ ಕೇಳ್ವ ಕಾೞ್ವಂಡಿರಂತೆ ತಮ್ಮ ಕರ್ಮಜ್ಞಾನಭಕ್ತಿಗಳ್ಗೆ ಫಲಮಾಗಿ ಮುಕ್ತಿಯಂ ಬಯಸುವರ್ । ಈರಾಯನವರಂತಲ್ಲದೆ ತನ್ನಾಳ್ದರ ನೆಲೆಯಂ ತನ್ನದುಮಂ ತಿಳಿದಿರ್ಪುದಱಿಂ ನಾರಾಯಣಂ ತನ್ನಾಳ್ಗಳಪ್ಪೆಮ್ಮೆಳ್ಳಿನ ಮಿಲ್ಲದ ನೇಹಂಬೆರಸಿ ಎಳಸಿಸುವಿನೆಡಱಂ ತೀರ್ಚಲ್ಕೆಂದೌಷಧಿಗುಡಿವ ತಾಯಂತೆ ತಾನಿತ್ತ ಕರಣಕಳೇಬರಂಗಳಿಂ ತಾನಿತ್ತ ಪೂಜೋಪಕರಣಂಗಳಿಂ ತನ್ನಂ ತಾನೆ ಪೂಜೆಗೆಯ್ವನೆಂದು ತನ್ನ ಸ್ವರೂಪಪಾರತಂತ್ರ್ಯಮಂ ತಿಳಿದು ನಿರ್ಭಯನಾಗಿರ್ಪಂ । ಈನೆಲೆ ಸತ್ಸಹವಾಸದಿಂದೆಯುಂ ಸದಾಚಾರ್ಯಸಮಾಶ್ರಯಣದಿಂದೆಯುಂ ಗುರುಕುಲವಾಸದಿಂದೆಯುಂ ಭಗವತ್ಕಟಾಕ್ಷದಿಂದೆಯುಂ ದೊರೆಕೊಳ್ವುದಲ್ಲದೆ ಬಱಿಯೋದುಗಲ್ವ ಬಲ್ಮೆಯಿಂ ಸಮನಿಸದು । ಈಶೇಷತ್ವ ಪಾರತಂತ್ರ್ಯಂಗಳಂ ತಿಳಿವುದೆ ಸಕಲವೇದಾಂತಜ್ಞಾನಮುಂ ಮೂಲಮಂತ್ರಾರ್ಥತತ್ವಮುಂ ಮಂತ್ರರತ್ನ ತಾತ್ಪರ್ಯ

ಮುಂ ಚರಮಶ್ಲೋಕಾರ್ಥನಿಷ್ಕರ್ಷಮುಮೆನಿಸಿರ್ಕುಂ। ಇದನೆ ದಿವ್ಯಸೂರಿಗಳ್ ತಮ್ಮ ದಿವ್ಯಪ್ರಬಂಧಂಗಳಿಂ ಪಲವಗೆಯಿಂ ನಿರವಿಸುವರ್। ನಾಥಯಾಮುನ ಯತಿವರಾದಿಗಳಿದನೆ ತಂತಮ್ಮಡಿಗಳಂ ಪೊರ್ದಿದ ಶಿಷ್ಯರ್ಗುಪದೇಶಂಗುಡುವರ್। ಇವನಿರವಂ ನಿರವಿಸೆ ಮುಂ ಕೊಲ್ಲಿನಗರದೊಳುದಿಸಿದ ಕುಲಶೇಖರನಂ ನೆನೆಯಿಸುವನೆಂದು ಮನದೊಳಾನಂದಂಬಡೆಯುತ್ತಿರ್ಪಿನಂ—

ರಾಯನುಂ ಮಂತ್ರಸ್ನಾನಾಲಂಕಾರಭೋಜ್ಯಾಸನಂಗಳೊಳ್ ತತ್ತದುಚಿತ ಭಗವದುಪಚಾರಂಗಳಿಂದಾರಾಧನಮಂ ನೆಗಳ್ಚಿ ತೀರ್ಥಪ್ರಸಾದಂಗೊಂಡು ಕೃತಾರ್ಥನೆನಿಸಿ ಮತ್ತಂ ಭಗವದ್ಗುಣಾನುಭವಕ್ಕೆಳಸಿ ಅಳಹಿಯಸಿಂಗರಾರ್ಯರಂ ನೋಡಿ ಸ್ಮೃತೀತಿಹಾಸಪುರಾಣಂಗಳೊಳ್ಭಗವದ್ವೈಭವಮಂ ಸಂಶಯವಿಪರ್ಯಯಮಿಲ್ಲದಂತೆ ಸೊಲ್ಲಿಸುವೊಂದಂಶಮಂ ಪೇಳ್ವುದೆಂಬುದುಮದರ್ಕವರ್ ಪೆರ್ಕಳಂಗೊಂಡು ಗುರುಪರಂಪರೆಯಂ ನೆನೆದುಪಕ್ರಮಿಸಿ ತಿಳುಪಿದರದೆಂತೆನೆ :—

— ಭಗವದ್ವೈಭವ ವಿವರಣಂ —

ಶ್ರಿಯಃಪತಿಯುಮವಾಪ್ತ ಸಮಸ್ತಕಾಮನುಮಖಿಲಹೇಯಪ್ರತ್ಯನೀಕನುಂ ಸಮಸ್ತಕಲ್ಯಾಣಗುಣಾಶ್ರಯನುಮಪ್ಪ ಶ್ರೀಮನ್ನಾರಾಯಣಂ ಬ್ರಹ್ಮಾದಿದೇವತೆಗಳಂ ಮನುಷ್ಯರುಮಂ ಸೃಜಿಸಿಯವರ್ಗೆ ಹಿತಾಹಿತಂ ತಿಳಿವುದರ್ಕೆ ನಾಲ್ಕುಂ ವೇದಂಗಳನುಪದೇಶಂಗೆಯ್ದು ಆವೇದಾರ್ಥಮಂ ವ್ಯಕ್ತಮಾಗಿ ತಿಳಿವುದರ್ಕೆ ಸ್ಮೃತೀತಿಹಾಸಪುರಾಣಂಗಳಂ ನಿರವಿಸಿದಂ. ಅವಱೊಳ್ ಸ್ಮೃತಿಗಳ್ ಭಗವದಾರಾಧನರೂಪಮಾದ ವರ್ಣಾಶ್ರಮೋಚಿತಕರ್ಮಂಗಳಂ ವಿಧಿಸುವ ವೇದಂಗಳ ಪೂರ್ವಭಾಗದರ್ಥಮಂ ತಿಳಿಸುವುವು. ಇತಿಹಾಸಪುರಾಣಂಗಳೆರಡುಂ ಭಗವತ್ಸ್ವರೂಪ ರೂಪ ಗುಣ ವಿಭವೈಶ್ವರ್ಯಂಗಳಂ ಪ್ರತಿಪಾದಿಸುವ ವೇದಾಂತಂಗಳ ತತ್ವಾರ್ಥಮಂ ವ್ಯಕ್ತಮಾಗಿ ತಿಳಿಸುವುವು. ಈಯೆರಡಱೊಳಂ—

ಶ್ಲೋ॥ ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್॥

ಎಂಬ ವಚನದೊಳಿತಿಹಾಸಮುಂ ಮೊದಲ್ಪೇೞ್ದುದಱಿಂದಿದೆ ಮುಖ್ಯಮಾಗಿರ್ಕುಂ. ಇತಿಹಾಸಂಗಳೊಳಂ ದ್ವಾಪರಾಂತದೊಳ್ ವೇದೋದ್ಧರಣಾರ್ಥಮಾಗಿ ಶ್ರೀಮನ್ನಾರಾಯಣಾಂಶದಿಂದುದಿಸಿದ ವೇದವ್ಯಾಸರ್ ಸಕಲ ವೇದಶಾಸ್ತ್ರಾರ್ಥಂಗಳನಾರಯ್ದು ತಾಂ ತಿಳಿದ ಪಲವುಂ ತತ್ವಾರ್ಥಮಂ ಲೋಕಹಿತಾರ್ಥಮಾಗಿ ಪವಣ್ಗೊಳಿಸಿದುದಱಿಂದೀ ಮಹಾಭಾರತಮೆ ಪ್ರಬಲಮಾಗಿರ್ಕುಂ. ಇದಱೊಳಂ ಭಗವದ್ವಿಷಯಮನೇ ಪ್ರತಿಪಾದಿಪುದಱಿಂ ಶ್ರೀವಿಷ್ಣುಸಹಸ್ರನಾಮಮುಂ ಮೋಕ್ಷಧರ್ಮಮುಂ ಭಗವದ್ಗೀತೆಯುಮುತ್ತಮಂಗಳಾಗಿರ್ಪುವು. ಇವಱೊಳ್ ವಿಷ್ಣುಸಹಸ್ರನಾಮಂ ಭಗವದಾರಾಧನಜಪಾದ್ಯುಪಯೋಗಮಾಗಿರ್ದೊಡಮದಱಿಂ ತತ್ವಹಿತಪುರುಷಾರ್ಥಂಗಳಂ ತಿಳಿವುದರಿದಾಗಿರ್ಕುಂ. ಮೋಕ್ಷಧರ್ಮಂ ಸಕಲಾರ್ಥಪ್ರತಿಪಾದಕಮಾಗಿರ್ಕುಮಾದೊಡಮೀಭಗವದ್ಗೀತೆ—

— ಭಗವದ್ಗೀತೆಯ ಮಾಹಾತ್ಮ್ಯಂ —

ಶ್ಲೋ॥ ಗೀತಾಸು ಗೀತಾಃ ಕರ್ತವ್ಯಾಃ ಕಿಮನ್ಯೈಶ್ಶಾಸ್ತ್ರಸಂಗ್ರಹೈಃ।
ಯಾಸ್ವಯಂ ಪದ್ಮನಾಭಸ್ಯ ಮುಖಪದ್ಮಾದ್ವಿನಿಸ್ಸೃತಾಃ ॥

ಎಂಬ ಮರ್ಯಾದೆಯಿಂ ಶ್ರೀಕೃಷ್ಣನ ದಿವ್ಯಮುಖಾರವಿಂದೋದ್ಭವಮಾಗಿರ್ಪುದಱಿಂ ಸರ್ವೋತ್ಕೃಷ್ಟಮೆನಿಪುದು. ಅದಱಿಂದಿದಂ ಸಕಲ ವೈದಿಕರುಂ ಉಪನಿಷತ್ತೆಂದು ಪೇೞ್ವರ್. ತದ್ವ್ಯಾಖ್ಯಾತೃಗಳುಂ ಮೂವತ್ತೆರಡುಮುಪನಿಷತ್ತುಗಳೊಡನಿದನುಂ ವ್ಯಾಖ್ಯಾನಂಗೆಯ್ದರ್—ಎಂದದಱ ಮಹಾತ್ಮ್ಯಮನುಪಪಾದಿಸಿ ಪದಿನೆಂಟುಮಧ್ಯಾಯಂಗಳನೋದಿಯದಱೊಳ್ ಶ್ಲೋಕಂಗಳೇೞುಂ ನೂಱಕ್ಕಂ ಪ್ರತಿಶ್ಲೋಕದರ್ಥಮಂ ಪೇೞ್ವುದುಂ—

ಆದರದೊಳ್ ಕೇಳ್ದರಸನುಂ ಅಖಿಲತತ್ವಾರ್ಥಂಗಳಂ ಕರತಲಾಮಲಕಮಾಗಿ ತಿಳಿದು ತಿಳಿದರ್ಥಂಗಳಿಂದುಂ ಮಱೆಯದಂತೆಲ್ಲಮುಂ

ಸಂಗ್ರಹಿಸಿ ಪೇೞಲ್ವೇೞ್ಕುಮೆಂದು ಬೆಸಗೊಳ್ವುದುವಿವರಂ—

ಶ್ಲೋ॥ ಯುಕ್ತಂ ಹಿ ವಿದುಷಾಂ ಲೋಕೇ ಸಮಾಸವ್ಯಾಸಧಾರಣಂ ॥

ಎಂಬ ತೆಱದಿಂ ವಿಸ್ತರಮಾಗಿ ಕೇಳ್ದರ್ಥಮಂ ಸಂಕ್ಷೇಪಮಾಗಿಯುಂ ಕೇಳ್ದೊಡೆ ಮಱವುದೋಱದೆ ನೆನೆಪಾಗಿರ್ಕುಮೆಂದು ಮನಮೊಲ್ದು ಪದಿನೆಂಟಧ್ಯಾಯಕ್ಕಮೊಂದು ಸಮುದಾಯಾರ್ಥಮುಮಂ ಆಱುಮಾಱುಮಧ್ಯಾಯಂಗಳ್ಗೊಂದೊಂದರ್ಥಮಾಗಿ ಮೂಱುಂ ಷಟ್ಕಾರ್ಥಂಗಳುಮಂ ಒಂದೊಂದಧ್ಯಾಯಕ್ಕೊಂದೊಂದರ್ಥಮಾಗಿ ಪದಿನೆಂಟುಮಧ್ಯಾಯಾರ್ಥಂಗಳುಮಂ ಸಂಗ್ರಹಿಸಿ ಸುಲಭಮಾಗಿಯುಂ ಸುವ್ಯಕ್ತಮಾಗಿಯುಂ ತಿಳುಪಿದರದೆಂತೆನೆ :—

— ಭಗವದ್ಗೀತೆಯ ಸಮುದಾಯಾರ್ಥಂ —

ತಂತಮ್ಮ ವರ್ಣಾಶ್ರಮೋಚಿತಮಾಗಿ ವೈರಾಗ್ಯಂಬೆರಸಿದ ಕರ್ಮಜ್ಞಾನಂಗಳಿಂ ಬಳೆದ ಭಕ್ತಿಗಂ ವಿಷಯಮಾದ ಪರಬ್ರಹ್ಮಂ ಶ್ರೀಮನ್ನಾರಾಯಣನೆಂಬುದು ಸಮುದಾಯಾರ್ಥಂ ।

— ಷಟ್ಕಾರ್ಥಂಗಳ್ —

ಜ್ಞಾನಕರ್ಮಂಗಳೆರಡುಂ ಯೋಗಾಭ್ಯಾಸದೊಡಗೂಡಿ ಆತ್ಮಸಾಕ್ಷಾತ್ಕಾರಸಾಧನಮಾಗಿರ್ಪುದೆಂಬುದಂ ಮೊದಲ ಆಱುಮಧ್ಯಾಯದೊಳ್ಪೇೞ್ವುದು । ಜ್ಞಾನಕರ್ಮಂಗಳಿಂದುದಿಸಿದ ಭಕ್ತಿಯೋಗದಿಂ ಪರಮಾತ್ಮತತ್ವಜ್ಞಾನಂ ಪುಟ್ಟುವುದೆಂಬುದನೆರಡನೆಯ ಆಱುಮಧ್ಯಾಯದೊಳ್ಪೇೞ್ವುದು । ಪ್ರಕೃತಿಜೀವಾತ್ಮಪರಮಾತ್ಮಸ್ವರೂಪಮಂ ಕರ್ಮಜ್ಞಾನಭಕ್ತಿಗಳ ಸ್ವರೂಪಮುಮಂ ಕಡೆಯಾಱುಮಧ್ಯಾಯದೊಳ್ಪೇೞ್ವುದು ।

— ಪ್ರತ್ಯಧ್ಯಾಯದ ಸಂಗ್ರಹಾರ್ಥಂ —

ಎರಡು ದೞಕ್ಕಂ ಪುಯಲಡಸಿರುವ ಸಮಯದೊಳ್ ಬಂಧುಸ್ನೇಹಮುಂ ಕಾರುಣ್ಯಮುಂ ಸ್ವಜಾತಿಧರ್ಮಮಾದ ಯುದ್ಧದೊಳಧರ್ಮಬುದ್ಧಿಯುಂ ಪುಟ್ಟಿಯರ್ಜುನಂ ವ್ಯಾಕುಲಚಿತ್ತನಾದನೆಂಬುದಂ ಮೊ

ದಲಧ್ಯಾಯದೊಳಂ। ಇಂತು ಶೋಕಾವಿಷ್ಟನಾಗಿ ತನ್ನಡಿಗೆಱಗಿದರ್ಜುನಂ ಗನಿತ್ಯಮಾದ ಶರೀರಾದಿಗಳತ್ತಣಿಂ ಬೇಱಾಗಿ ನಿತ್ಯಮಾದ ಜೀವಾತ್ಮನಂ ತಿಳಿವ ಸಾಂಖ್ಯವೆಂಬ ಬುದ್ಧಿಯುಂ ಫಲಸಂಗಕರ್ತೃತ್ವರಹಿತಮಾದ ಕರ್ಮಸ್ವರೂಪಮಂ ತಿಳಿವ ಯೋಗವೆಂಬ ಬುದ್ಧಿಯುಮಾತ್ಮಾವಲೋಕನ ಸಾಧನಮಾದ ಸ್ಥಿರಬುದ್ಧಿಯುಂ ಪುಟ್ಟಿಪುವೆಂಬುದನೆರಡನೆಯ ಅಧ್ಯಾಯದೊಳಂ। ಈಕರ್ಮದಿಂದೀಫಲಮಂ ಸಾಧಿಪೆನೆಂಬ ಫಲಾಪೇಕ್ಷೆಯುಂ ಈ ಕರ್ಮವೆನಗೆ ಫಲಮಂ ಸಾಧಿಪುದಱಿಂದೆನ್ನದೆಂಬ ಸಂಗಮುಮನೀಕರ್ಮ ಮನಾನೆಸಗುವೆನೆಂಬ ಕರ್ತೃತ್ವಮುಮಂ ಕಳೆದು ಸತ್ವರಜಸ್ತಮೋಗುಣಂಗಳ್ ತಂತಮ್ಮ ಸ್ವರೂಪಕ್ಕನುಗುಣಮಾದ ಕರ್ಮಂಗಳಂ ಗೆಯ್ಸುವುವೆಂದಾದೊಡಂ ಕರಣಕಳೇಬರಂಗಳನಿತ್ತ ಪರಮಾತ್ಮನೆ ಗೆಯ್ಸುವನೆಂದಾದೊಡಂ ತಿಳಿದು ಕರ್ಮಮನಾಚರಿಸಲ್ವೇಟ್ಪುದೆಂಬುದಂ ಮೂಱನೆಯ ಅಧ್ಯಾಯದೊಳಂ। ಈಕರ್ಮಯೋಗದೊಳ್ ಜ್ಞಾನಮುಂ ಬೆರಸಿರ್ಪುದೆಂಬುದಂ ಈಕರ್ಮಭೇದಂಗಳುಮಂ ಅದಱೊಳ್ ಜ್ಞಾನಾಂಶಮೆ ಪ್ರಧಾನಮೆಂಬುದಂ ಈಕರ್ಮಾರಾಧ್ಯನಪ್ಪ ಶ್ರೀಮನ್ನಾರಾಯಣನ ಅವತಾರ ರಹಸ್ಯಂಗಳುಮಂ ನಾಲ್ಕನೆಯ ಅಧ್ಯಾಯದೊಳಂ। ಈಕರ್ಮಯೋಗಮನಾಚರಿಪುದು ಸುಲಭಮೆಂದುಮಿದಱಿಂ ಶೀಘ್ರಂ ಫಲಂ ಸಿದ್ಧಿಯಪ್ಪುದೆಂದುಂ ಇದಱ ಭೇದಂಗಳುಮನೈದನೆಯ ಅಧ್ಯಾಯದೊಳಂ। ಯೋಗಾಭ್ಯಾಸಪ್ರಕಾರಮಂ 'ನಾಲ್ಕುಂ ತೆಱನಾದ ಯೋಗಿಗಳ ಭೇದಮುಮಂ ಯೋಗಸಾಧನಂಗಳುಮಂ ಯೋಗಸಿದ್ಧಿಯುಮಂ ಪಲವುಂ ತೆಱದ ಯೋಗಿಗಳತ್ತಣಿಂ ಪರಮಾತ್ಮೋಪಾಸಕನಾದ ಯೋಗಿಯೆ ಮುಖ್ಯನೆಂಬುದುಮನಾಱನೆಯ ಅಧ್ಯಾಯದೊಳಂ। ಪರಮಪುರುಷನ ಮಹಿಮೆಯುಂ ಜೀವಾತ್ಮಂಗೆ ಪ್ರಕೃತಿಬಂಧದಿಂದಾಮಹಿಮೆ ತಿಳಿಯದಿರ್ಪ ತೆಱನಂ ಆ ಪ್ರಕೃತಿಬಂಧಮಂ ಪಱಿವುದರ್ಕೆ ಆ ಪರಮಪುರುಷನಡಿವಿಡಿವುದೆ ಉಪಾಯಮೆಂಬುದುಮಂ ನಾಲ್ಕು ತೆಱನಾದ ಭಕ್ತರುಮಂ ಅವರೊಳಂ ಪರ

ಮಾತ್ಮಪ್ರಾಪ್ತಿರೂಪಮಾದ ಮುಕ್ತಿಯುಂ ಬಯಸುವ ಜ್ಞಾನಿಯೇ ಉತ್ತ ಮನೆಂಬುದನೇೞನೆಯ ಅಧ್ಯಾಯದೊಳಂ। ಐಹಿಕಾಮುಷ್ಮಿಕಮಾದೈಶ್ವ ರ್ಯಮುಂ ಜೀವಾತ್ಮಪ್ರಾಪ್ತಿರೂಪಮಾದ ಕೈವಲ್ಯಮುಂ ಪರಮಾತ್ಮಪ್ರಾ ಪ್ತಿರೂಪಮಾದ ಮುಕ್ತಿಯುಂ ಬಯಸುವ ಮೂಱುಂ ತೆಱದ ಭಕ್ತರ್ಗೆ ಬೇಱೆಬೇಱೆ ತಿಳಿಯುವೇೞ್ಪಿದಿದೆಂಬುದನೆಂಟನೆಯ ಅಧ್ಯಾಯದೊಳಂ। ಪರಮಪುರುಷನ ನಿರತಿಶಯಮಾಹಾತ್ಮ್ಯಮುಂ, ಅವಂ ಮನುಷ್ಯರೊಳವತರಿ ಸಿದೊಡಂ ಮಹಿಮೆಯೊಂದೆ ತೆಱನಾಗಿರ್ಪುದೆಂಬುದುಮುಂ, ಭಗವದ್ಭಕ್ತ ನ ಬಗೆಗಳುಮುಂ, ಭಕ್ತಿಯೋಗದ ನೆಲೆಯುಮನೊಂಬತ್ತನೆಯ ಅಧ್ಯಾಯ ದೊಳಂ। ಪರಮಪುರುಷನೊಳ್ ಭಕ್ತಿ ಪುಟ್ಟುವುದರ್ಕಾಗಿಯುಂ ಪುಟ್ಟಿದ ಭಕ್ತಿ ಪೆರ್ಚುವುದರ್ಕಾಗಿಯುಂ ಅವನ ಕಲ್ಯಾಣಗುಣಂಗಳುಮುಂ ಈ ಜಗಮೆಲ್ಲಮುಮವನೊಡಮೆಯುಮೊಡಲುಮಾಗಿಯವನಧೀನಮಾಗಿ ರ್ಪುದೆಂಬುದುಮುಂ ಪತ್ತನೆಯ ಅಧ್ಯಾಯದೊಳಂ। ಪರಮಪುರುಷನ ದಿವ್ಯ ಮಹಿಮೆಯನರ್ಜುನಂ ಸಾಕ್ಷಾತ್ಕಾರಮಾಗಿ ಕಂಡ ಬಗೆಯುನಾಪರಮ ಪುರುಷನಂ ತಿಳಿವುದರ್ಕಮವನಡಿದಾವರೆಗಳಂ ಸೇಱುವುದರ್ಕಂ ಭಕ್ತಿಯೇ ಉಪಾಯಮೆಂಬುದುಮುಂ ಪನ್ನೊಂದನೆಯ ಅಧ್ಯಾಯದೊಳಂ। ಭಗವ ದುಪಾಸನಾರೂಪಮಾದ ಭಕ್ತಿಯೋಗಮೇ ಸರ್ವೋತ್ತಮಮೆಂಬುದಂ, ಇದಱೊಳ್ ಶಕ್ತಿಯಿಲ್ಲದವರ್ಗೆ ಈ ಭಕ್ತಿಯುಂ ಸಾಧಿಸುವುದರ್ಕೆ ತಂ ತಮ್ಮ ಶಕ್ತ್ಯನುಗುಣಮಾದ ನಡತೆಗಳುಮುಂ ಜೀವೋಪಾಸಕನ ನಡತೆ ಗಳುಮುಂ ಪನ್ನೆರಡನೆಯ ಅಧ್ಯಾಯದೊಳಂ। ಶರೀರದ ನೆಲೆಯುನಾತ್ಮ ಜ್ಞಾನಕ್ಕೆ ಸಾಧನಂಗಳುಮುಂ, ಆತ್ಮಸ್ವರೂಪಮುಮನಾತ್ಮಂಗೆ ಸಂಸಾರ ಸಂಬಂಧಕಾರಣಮುಮುಂ, ಪ್ರಕೃತಿಜೀವಾತ್ಮರ ಭೇದಮುಮುಂ ಪದಿಮೂಱ ನೆಯ ಅಧ್ಯಾಯದೊಳಂ। ಸತ್ವರಜಸ್ತಮೋಗುಣಂಗಳ್ಜೀವಾತ್ಮಂಗೆ ಬಂಧ ಕಂಗಳಾಗದ ತೆಱನಂ, ಆಱ ಗುಣಂಗಳ್ಪೆರ್ಚಿರ್ಪುದೆಂಬುದರ್ಕೆ ಕುಱುಪು ಗಳಾದ ಕಾರ್ಯಂಗಳುಮುಂ, ಆಱ ಗುಣಂಗಳಿಂ ಬರ್ಪ ಉತ್ತಮ ಮಧ್ಯ

ಮಾಧವಂಗಳಾದ ಜನ್ಮಂಗಳುವಂ, ಆಱ ಗುಣಂಗಳಂ ಜಯಿಸಿರ್ಪನ ನಡತೆಗಳಂ, ಜಯಿಸುವ ಪ್ರಕಾರವುವಂ ಪದಿನಾಲ್ಕನೆಯ ಅಧ್ಯಾಯ ದೊಳಂ। ಪ್ರಕೃತಿಯೊಡಗೂಡಿ ಸಂಸರಿಸುವ ಜೀವಾತ್ಮವರ್ಗವುಂ ಪ್ರಕೃತಿಬಂಧಮಂ ಕಳೆದು ಮುಕ್ತಿವಡೆದಿರ್ಪ ಜೀವಾತ್ಮವರ್ಗವುಂ, ಪುರುಷರೆನಿಪುವು—ಈ ಯೆರಡರ್ಕವೊಡೆಯನಾಗಿ ಇವಱೊಳ್ವ್ಯಾಪಿಸಿ ಯಿವಂ ಪೊರೆವುದಱಿಂ ಪರಮಾತ್ಮಂ ಪುರುಷೋತ್ತಮನೆನಿಸಿ, ಈ ಜೀ ವಾತ್ಮರತ್ತಣಿಂ ಬೇಱಾಗಿರ್ಪನೆಂಬುದಂ ಪದಿನೈದನೆಯ ಅಧ್ಯಾಯದೊ ಳಂ। ವೇದಶಾಸ್ತ್ರಂಗಳೊಳ್ ವಿಶ್ವಾಸಮುಂಟಾಗಿ ನಡೆವರ್ ದೇವಪ್ರಕೃತಿ ಯುವರೆಂದುಂ ಈವಿಶ್ವಾಸಮಿಲ್ಲದೆ ತಮ್ಮಿಚ್ಛೆವಂದಂತೆ ನಡೆವವರಾಸುರ ಪ್ರಕೃತಿಯುವರೆಂದುಂ ತಿಳುಪಿ, ಶಾಸ್ತ್ರದೊಳ್ಪೇಟ್ಟಂತೆ ನಡೆವರ್ಗಲ್ಲದೆ ತತ್ವಜ್ಞಾನಮುಂ ಸದಾಚಾರಮುಂ ದೊರಕೊಳ್ಳದು ಎಂಬುದಂ ಪದಿ ನಾಱನೆಯ ಅಧ್ಯಾಯದೊಳಂ। ಶಾಸ್ತ್ರವಿಧಿಯಿಲ್ಲದೆ ನಡೆವ ನಡತೆಯೆಲ್ಲ ಮುಂ ಆಸುರಮಾದುದಱಿಂ ನಿಷ್ಫಲಮೆಂದುಂ, ಶಾಸ್ತ್ರವಿಹಿತಮಾದ ಕರ್ಮಮುಂ ಸಾತ್ವಿಕರಾಜಸತಾಮಸಭೇದದಿಂ ಮೂಱುಂ ತೆಱನಾ ಗಿರ್ಪುದೆಂದದಱ ಕುಱುಪುಗಳಂ ಪದಿನೇೞನೆಯ ಅಧ್ಯಾಯದೊಳಂ। ತಾಮಸರಾಜಸಸಾತ್ವಿಕಂಗಳಾದ ನಡತೆಗಳಂ ಬೇಱೆವೇಱೆ ತಿಳುಪಿ ಇವಱೊಳ್ಮೋಕ್ಷಾರ್ಥಿಗೆ ಸಾತ್ವಿಕಂಗಳೆ ನಡೆಯುತಕ್ಕವೆಂಬುದಂ, ಈ ಸಾತ್ವಿಕಕರ್ಮಾಚರಣದಿಂ ಪೆರ್ಚಿದ ಭಗವದ್ಭಕ್ತಿಯೆ ಮೋಕ್ಷಸಾಧನ ಮೆಂಬುದಂ ಪದಿನೆಂಟನೆಯ ಅಧ್ಯಾಯದೊಳಂ ಪ್ರತಿಪಾದಿಪುದು.

— ಕರ್ಮ ಜ್ಞಾನ ಭಕ್ತಿಯೋಗಂಗಳ ನಿಷ್ಕೃಷ್ಟಾರ್ಥ —

ಇವೆಲ್ಲಮುಂ ಭಾವಿಸೆ ತಪಂಗೆಯ್ವುದುಂ ತೀರ್ಥಯಾತ್ರೆಗಳಂ ಮಾ ಡ್ಪುದುಂ ದಾನಯಜ್ಞಾದಿಗಳನಾಚರಿಪುದುಂ ಮೊದಲಾದುದು ಕರ್ಮ ಯೋಗಮೆನಿಪುದು। ಪರಿಶುದ್ಧಾಂತಃಕರಣದಿಂದಾತ್ಮಜ್ಞಾನಂಗೆಯ್ವುದು ಜ್ಞಾನಯೋಗಮೆನಿಪುದು। ಅತ್ಯಂತಪ್ರೀತಿಯಿಂ ಪರಮಾತ್ಮಧ್ಯಾನಮಂ

ಮಾಳ್ಪುದು ಭಕ್ತಿಯೋಗಮೆನಿಪುದು । ಇವು ಮೂಱುಂ ಒಂದಱೊ ಳೊಂದು ಬೆರೆದಿರ್ಪುವು । ಅದಱೊಳ್ ಕರ್ಮಯೋಗಿಗೆ ಕರ್ಮಂ ಪ್ರಧಾನ ಮಾಗಿ ಜ್ಞಾನಭಕ್ತಿಗಳೆರಡುಂ ಅದರ್ಕಂಗಂಗಳಾಗಿರ್ಪುವು । ಭಕ್ತಿಯೋಗಿಗೆ ಭಕ್ತಿಯೇ ಪ್ರಧಾನಮಾಗಿ ಕರ್ಮಜ್ಞಾನಂಗಳೆರಡುಂ ಅದರ್ಕಂಗಂಗ ಳಾಗಿರ್ಪುವು । ಈಮೂಱುಂ ಯೋಗಂಗಳ್ಗಂ ತಂತಮ್ಮ ವರ್ಣಾಶ್ರ ಮೋಚಿತಸದಾಚಾರಮಂಗಮಾಗಿರ್ಪುದು । ಮಿಕ್ಕೆರಡುಂ ಯೋಗಂ ಗಳತ್ತಣಿಂ ಭಕ್ತಿಯೋಗಮೆ ಉತ್ತಮಂ । ಇದೈಶ್ವರ್ಯಕೈವಲ್ಯಂಗಳ್ಗೆ ಸಾಧನಮಾಗಿರ್ದೊಡಮಿದಱಿಂ ಮುಕ್ತಿಯಂ ಸಾಧಿಪುದೇ ಚಾತುರ್ಯಂ। ಇಂತು ಮೋಕ್ಷಾರ್ಥಿಯಾದ ಭಕ್ತಂ ತನ್ನ ಶರೀರಸ್ಥಿತಿ ಮುಂತಾದ ಯೋಗಕ್ಷೇಮದೊಳಂ ತನಗಾಸಕ್ತಿಯಿಲ್ಲದೆ ಸ್ವಾಮಿ ಕಟ್ಟುಮಾಡಿದಂ ತಿರ್ಪುದೆಂದು ಪರಮಾತ್ಮಾಧೀನಂಗೆಯ್ದು ತನಗೆ ಪರಮಾತ್ಮನ ಸೇವೆ ದೊರಕಿದುದೇ ಸುಖಮುಂ ಅದಿಲ್ಲದುದೇ ದುಃಖಮುಮಾಗಿರ್ಪುದಱಿಂ ದಾವಗಂ ಸ್ವಾಮಿಯ ಧ್ಯಾನಮುಂ ವಂದನಮುಂ ಕೀರ್ತನಮುಮೇ ಯಾತ್ರೆಯಾಗಿರ್ಪಂ। ಇರ್ಪ ಕಾಲಮೆಲ್ಲಮುಂ ತನ್ನ ವರ್ಣಾಶ್ರಮೋಚಿತ ಮಾದ ಸದಾಚಾರಮನಾಚರಿಸುವೆಡೆಯೊಳ್ ಸಾಧನಬುದ್ಧಿಯಂ ಬಿಟ್ಟು ಸ್ವಾಮಿಯ ಸೇವೆಯೆಂದು ನಡಿಸುತ್ತೆ ನಿರ್ಭರನಾಗಿರ್ದು ಮೋಕ್ಷಮಂ ಪಡೆವಂ—ಎಂದು ಗೀತಾತಾತ್ಪರ್ಯಂ.

ಎಂದಿಂತಳಹಿಯ ಸಿಂಗರಾರ್ಯರೊರೆದ ಸಮುದಾಯಾರ್ಥಮಂ ಷಟ್ಕಾರ್ಥಂಗಳನಧ್ಯಾಯಾರ್ಥಂಗಳಂ ತಾತ್ಪರ್ಯಾರ್ಥಮುಮಂ ಬಗೆ ಯೊಳ್ ಕುಱುಪುಗೊಂಡು ಸಂತಸಂಗೊಂಡು ರಾಯಂ ತನ್ನುಳ್ಳ ದೇಶ ಕೋಶಮನಿತುಂ ಎರವಿಲ್ಲದೆ ತನಗಮಿವರ್ಗಂ ಪುದುವಾಗಿರ್ದೊಡಂ ಕುಡುವುದುಂ ಕೊಳ್ವುದುಮೆಂಬ ತಮ್ಮಿರ್ವರ ಕುಲಧರ್ಮಮಂ ಪೆರ್ಮೆ ಗೊಳಿಸಲ್ಕೆಂದು ಉಡೆತೊಡವುಗಳಂ ಪೊನ್ಗಳುಮನಗರಂಗಳುಮನಿತ್ತು ಮನ್ನಿಸಿ ಬೞಿಕ್ಕೆತ್ತರದೊಳ್ ನೆಱೆದಿರ್ಪ ಋತ್ವಿಕ್ಪುರೋಹಿತ ನಾಕ್ಷತ್ರಿಕ

ಪ್ರಭೃತಿ ನಿಜಾಶ್ರಿತವರ್ಗಕ್ಕಂ ಸ್ವಪರದೇಶದಿಂದೇೞ್ತಂದ ಪಲವುಂ ಶ್ರೋತ್ರಿಯ ವರ್ಗಕ್ಕಂ ನಿತ್ಯನೈಮಿತ್ತಿಕಾದಿದಾನಂಗಳಂ ಮತ್ತಮುವರ್ಬೇೞ್ಪ ವಸ್ತುಗಳನಿತ್ತು ಬೀೞ್ಕೊಟ್ಟು ರಹಸ್ಯದೊಳ್ಕುಳ್ಳಿರ್ದು ಇಷ್ಟಾಲಾಪಂಗೆಯ್ವೆಡೆಯೊಳ್-ನಮಗೆ ಯಾದವಗಿರಿನಾರಾಯಣನ ಕರುಣಾಕಟಾಕ್ಷದಿಂ ಸರ್ವಾಭೀಷ್ಟಮುಂ ಕೈಸಾರ್ದಿರ್ಕುಂ. ಎನ್ನ ತಮ್ಮಂದಿರಪ್ಪ **ದೇವರಾಜರಸ ಮುೞ' ದೇವರಾಜರಸ**ರನಾಂ ಕುವರರ್ಗ್ಗೆತ್ತಿರ್ಪುದಱಿಂ ಪುತ್ರವಂತನುಮಾಗಿರ್ಪೆಂ. ಆದೊಡಂ ಸಿಸುವಂ ಬಯಸುವ ರಾಣಿಯುಂ ನೋಂಪಿಗೆಯಿಸುವ ನೆವದಿಂ ಭೂಲೋಕವೈಕುಂಠಮುಂ ಜ್ಞಾನಮಂಟಪಮುಮೆನಿಪ **ಮೇಲ್ಕೋಂಟೆಗೆ** ಪೋಪೆನೆಂದು ಎಣಿಸಿರ್ಪೆಂ—ಎಂಬುದುಂ ;

ಈ ಮಾರಾಯನ ನುಡಿಗೇಳ್ದಿವರುಮತ್ಯಂತಸಂತೋಷದಿಂದೆ—ಈಗಳಾಯಾದವಗಿರಿಯೊಳ್ ಚೈತ್ರಮಾಸದಾದ್ರಾ್ರನಕ್ಷತ್ರದೊಳ್ ತಿರುನಕ್ಷತ್ರಮೆಂಬ ಪಿರಿಯುಕ್ಕೆವಂ ನೆಗೞ್ಗುಂ. ಅದರ್ಕೆ ಪಲವುಂ ದಿವ್ಯದೇಶಂಗಳಿಂದೆಯ್ತರ್ಪ ದೇಶಿಕಸಾರ್ಥದರ್ಶನದಿಂ ಕೃತಾರ್ಥರಪ್ಪೆವೆಂದೊರೆವುದುಂ ;

ರಾಯನುಮತಿಹರ್ಷದಿಂ ಮೌಹೂರ್ತಿಕರ್ ಕೂರ್ತ ಸುಮುಹೂರ್ತದೊಳಾನೆಕುದುರೆಕಾಲಾಳ್ಗಳೊಗ್ಗಿನಗ್ಗಳದ ಕಳಕಳಮನೊಳಕೊಂಡು ಮೊೞಗುವ ಪಟಹಕಾಹಳಾದಿವಾದ್ಯಘೋಷತೋಷಿತನಾಗಿ ಪಯಣಗತಿಯೊಳಂತಪುರಂಬೆರಸು **ಯಾದವಾಚಲ**ದ ತಪ್ಪಲಂ ಸಾರ್ದಲ್ಲಿ ಬಲ್ವಡೆಯುನಿೞಿಪಿ ಮಿತಪರಿಜನಂಬೆರಸು ಮುಂತಣ್ಗೆ ನಡೆಯುತ್ತೆ—

— ಯಾದವಾಚಲದ ದಾರಿಯ ವರ್ಣನೆ —

ಅಲ್ಲಿ ನೆಟ್ಟನೆ ಬೆಳೆದು ಬಾಂಬಟ್ಟೆಯುಂ ಕಟ್ಟೆ ಮುಡಿಯೊಳ್ನೀಸವರ್ಟ್ಟುದಳೆದಿರ್ಪುದಱಿಂ ಸಿರಿಯುರಸನಡಿದೊಳೆಯುಲ್ಕೆ ಕಂದದೊಳ್ಕಜ್ಜನದ ಪೊಂದಂಬಿಗೆಯಾಂತೆಸೆವ ದಂತಾವಳದಂತಿರ್ಪ ಕದಳಿಗಳುಂ। ಇತ್ತಲುಮತ್ತಲುಂ ಬೆಳೆದ ಪಲವುಂ ಕೊಂಬುಗಳೊಳ್ಪುತಿರ್ಪುದಱಿಂ ತತ್ತದುಚಿತಸ್ಥಾನದೊಳ್ ಪನ್ನೆರೞ್ನಾಮಮನಾಂತ ದೇಶಿಕರಂತಿರ್ಪ ಕೇದಗೆಗಳುಂ।

ಫಲಭರಮಂ ಪೊಱಲಾಱದೆ ಪೊಡವಿವರೆಗಂ ಬಾಗಿರ್ಪುದಱಿಂ ಪರಮಪುರುಷನಡಿದಾವರೆಗೆಱಗುವ ಪರಮಭಾಗವತರಂ ದೊರೆಗೊಳ್ವ ಬಾೞೆಗಳುಂ। ಎತ್ತರದೊಳ್ಬೆಳೆದ ನೆತ್ತಿಗೊಂಬಿನೊಳರೆವಿರಿದ ತಳಿರ್ಗೊಂಚಲಂ ತಾಳ್ದಿಸೆವುದಱಿಂ ಪುರುಷೋತ್ತಮಂಗೆ ಮಸ್ತಕದೊಳ್ ಕೆಯ್ಯೆತ್ತಿ ಮುಗಿವ ಭಕ್ತರಂತಿರ್ಪ ಮಾವುಗಳುಂ। ಎಡೆವಿಡದೊಂದೆ ಸೂೞಿೞೊಳ್ ಕಿಱುನನೆಯಾಂತಿರ್ಪುದಱಿಂ ಮಾಧವನ ಮಾನಸಾರಾಧನವಿಧಿಯೊಳ್ ನವಿರ್ವಡೆದ ಯೋಗಿಗಳಂ ಪಡಗೊಂಬ ಕಡವುಗಳುಂ। ಮೆಲ್ಲೆಲರ ಘುಲ್ಲಣೆಗೆ ತಲ್ಲಣಂಗೊಂಡೊಳ್ಪಲರಂ ಚೆಲ್ಲುವ ಬಳ್ಳಿಗೊಂಬುಗೊಂಡಿರ್ಪುದಱಿಂದಚ್ಯುತನಡಿದಾವರೆಯನರ್ಚಿಸುವರ್ಚಕರಂತೆಸೆವ ಸೋಗೆಗಳುಂ। ನಿಡುದೋಳ್ಗೊನೆಯಿಂದುಕ್ಕಿ ಪರಿವ ತಿಳಿನೀರ್ವೊನಲನನುಗೆಯ್ವುದಱಿಂ ಶಾರ್ಙ್ಗಿಯ ಪೂಜೆಗೆ ಭೃಂಗಾರೋದಕಮಂ ಕೆಯ್ನಗಪಿ ಸೂಸುವ ಸೂರಿಗಳಂತೆ ಸೊಗಯಿಪ ಕಿಱುವೆಟ್ಟುಗಳುಂ। ಮೀಱು ಮುಂತಣ್ಗೆ ನಡೆವ ನಿಡುಗೊಂಬಿನೊಳಿರುಳೆಳವೆಱೆಯುಂ ತಳೆದಿರ್ಪುದಱಿಂ ಪುಂಡರೀಕಾಕ್ಷನ ಗಂಡೂಷೋದಕಮನಾನಲ್ಕೆ ಪಳಿಕುಗಾಳಾಂಜಿದಳೆದ ಪೞಿಲೂೞಿಗದವರಂ ಬೞಿಸಲ್ವ ಪೊನ್ನೆಗಳುಂ। ಕೊಂಬುಗಳೆಡೆಯೊಳ್ ಪ್ರಲಂಬಮಾದ ಪಲವುಂ ಪೆರ್ಗಾಯ್ಗಳಂ ತಳೆದಿರ್ಪುದಱಿಂ ವನಮಾಲಿಗೆ ಧರಿಸಲ್ಕೆಂದು ಸಮೆದ ಮಾಲೆಗಳನೊಳಕೊಂಡಲರ್ಗೊಡೆಗಳನಾಂತು ಸನ್ನದಮಾದ ಮಾಲೆಗಾಱರಂತಿರ್ಪ ಪಲಸುಗಳುಂ। ತಾಳಿಂ ತುದಿವರೆಗಂ ಪೂತು ಪೊದೞ್ದೊಂದು ಕೊಂಬನಡರ್ದು ಪಡಲ್ವಟ್ಟು ಜೋಲ್ವ ಕಾಟ್ಮಲ್ಲಿಗೆಯುಂ ಪೊತ್ತಿರ್ಪುದಱಿಂ ದೈತ್ಯಾರಿಗೆ ಧರಿಸಲ್ಕೆ ಕಮ್ಮಲರ್ದೊಳಚಿವೆರಸು ಸಮೆದ ದುಂಡದಂಡೆಯುಂ ನೆಗಪಿ ನೀಡುವ ಪರಿಚಾರಕರಂ ನೆರಂಗೊಂಬ ಸುರಗಿಗಳುಂ। ಬಿರಿದ ಪೆರ್ಗಾಯಿವಡೆದಿರ್ಪುದಱಿಂ ಶೌರಿಗಲಂಕರಿಸಲ್ಕೆ ಬಣ್ಣಗರಡಿಗೆಯುಂ ಮುಚ್ಚುಳ್ದೆಗೆದು ರನ್ನಸರಮಂ ನೆಗೞ್ಚುವ ಭಂಡಾರಿಗರಂತೆ ಬಗೆವಡೆದ ದಾಡಿಮಂಗಳುಂ। ಪೊಣ್ಮಿ ಪೊಗರೇಱಿದ ಪೊಂಬಾಳೆಗಳಂ ಪೊತ್ತಿರ್ಪುದಱಿಂ ಹರಿಗೆ ಬೆಳ್ಜ

ವರಂಬೀಸುವ ಹರಿದಾಸರ ಪಾಂಗಿನೊಳಿರ್ಪ ತೆಂಗುಗಳುಂ। ಕುಕಿಲುತ್ತ ಗಳಪಿ ಪಾಡಿ ಕೇಗುವಿಡಿವುದಱಂ ತಱುವಾಯಿಂ ಋಗ್ಯಜುಸ್ಸಾಮಂ ಗಳುಮಂ ದ್ರಾವಿಡಪ್ರಬಂಧಂಗಳುಮನನುಸಂಧಿಪಧ್ಯಾಪಕರನನುಕರಿಸುವ ಕೋಗಿಲೆ ಗಿಳಿ ತುಂಬಿ ಸೋಗೆಗಳುಂ ಮನಂಗೊಳೆ—ಮೆಱೆವ ನೆಲಗಾಡಂ ನಿರವಿಸುತ್ತೆ

— ನೆಲಗಾಡ ವರ್ಣನೆ —

ಮುಂತಣ್ಗೆ ನಡೆದಾಯೆಡೆಯೊಳ್ ಮುಂ ದತ್ತಾತ್ರೇಯನುತ್ತ ಮಾಶ್ರಮಂಗೊಳಲ್ಕೆ ಮುಕ್ಕೋಲೊಂಡ ಸುತ್ತುವೇಲಿಯ ಬಿದಿರ್ವಿಂಡು ಗಳಂ। ಆನಡುವೆ ರಘುಪುಂಗವಂ ಮಲಂಗಲೆಂದು ಸೌಮಿತ್ರಿ ಸಮೆದ ನುಣ್ಬಾಸರೆಗಳಂ । ಸತ್ಯಭಾಮೆಯಂತಃಪುರದಂಗಳದೊಳ್ ಪಣ್ತಿದಿರ್ದ ಬಿತ್ತುಗಳಿಂ ಮೊಳೆತೆಳಸಸಿಗಳಂ ತಂದು ಮುಕುಂದನುಂ ತಾನುಂ ದೇವಿ ಯರುಂ ತಮ್ಮ ಸಿರಿಗೆಯ್ಗಳಿಂದಗೆದು ನಟ್ಟು ನೀರೆಱೆದು ಬೆಳೆಯಿಸಿದ ಪಲವುಮಭಿಜಾತಪಾರಿಜಾತಂಗಳಂ। ಮತ್ತಮಾವಗಂ ತಳಿರ್ತು ನನೆಯೇ ಱ ಪೂತು ಕಾಯುತ್ತ ಪಣ್ತಿರ್ಪ ಪಲವುಂ ಪೂವಳ್ಳಿಗಿಡುಮರಂಗಳಿಂ ಸಿಂಗರಂಬಡೆದ ಪೂದೋಟಂಗಳ ಪಾಂಗಂ ನಿಟ್ಟಿಸಿ ಕಟ್ಟೆಚ್ಚರಿವಟ್ಟು ನಿಂದು ಅಲ್ಲಿ ಕೊನೆಗೇಱ ತಿಱವ ಪೂವಡಿಗರ ಕೆಯ್ಗೆ ನಿಲ್ಕದಲದೊಂಬೆಗಳ್ ಕೈಪಡುವಂತೆ ನಿಡುಗೊಂಬುಗಳಂ ಬಾಗಿಸಿ ಕುಡುವ ಕೋಡಗಂಗಳಂ। ಆಂತಿರ್ಪ ಪಣ್ಗಳಂ ಕರ್ದುಂಕದೆ ಕಾಲಿಂ ಸೋಂಕದೆ ಮೀಸಲಟಿಯ ದಂತೆ ತೊಟ್ಟಂ ಕಟಿಲ್ಚಿ ಕೆಡಪಿ ಕೈಗೊಳಿಸುವ ಪುರುಳಿಗಳಂ। ಎಳದೊ ಳಚಿಸಸಿಗಳಂ ಬಳಸಿಯುಗೆದಾಲವಾಲಂಗೆಯ್ದು ಬಟಲ್ದು ತೋಂಟಿಗರ್ಗೆ ನೆರಮಾಗಿ ತಮ್ಮ ಬಾಗಿದ ಕೂರ್ಗೋಱಗುದ್ದಲಿಗಳಿಂದಗೆವ ಕಾಟ್ಪಂ ದಿಯ ಮಂದೆಗಳಂ।. ಅವಂ ಕಡೆಗಣ್ಚಿ ತಮ್ಮ ಕವಡುಗೋಡುಗಳಿಂ ದಿರ್ಮುಡಿಸಿ ತೋಡುವ ಕಡವೆಸಾರಂಗಂಗಳಂ। ಆಪೆರ್ಗುಟಿಗಳೊತ್ತಿಂಟ ಗೆಯ್ಮೆಯೊಳೆಱೆವ ಕಿಱುಗುಂಬದ ನೀರಿಂ ತುಂಬದಿರೆ ತಮ್ಮ ಪೊಡೆ

ಗೊಂಡ ನೀರಂ ಸೊಂಡಿಲೊಳ್ಕೊಗೆವೊಗೆದು ಸುಜೀವ ಸೊರ್ಕಾನೆ ಗಳಂ। ಎತ್ತಾನುಮಿವನಿಂತು ಸಸಿಗಳಂ ಮೇದಪುವೆಂಬ ಬಯಸಂದೆ ಯದಿಂ ಕಾಪುಗೊಂಡಿರ್ಪ ಪೆರ್ಬುಲಿಗಳಂ। ಅವರ ಮಱಿಗಳ್ತಾಯ ನಗಲ್ದಿರ್ಪುದಱಿಂ ಪಸಿದು ಬಸವಳಿಯೆ ಕಂಡು ಮಱುಕದಿಂ ತೊ ಱೆಯಿಯಿಟ್ಟು ಮೊಲೆಯೂಡುವ ಪೆಣ್ಬುಲ್ಲೆಗಳುಮಂ ಕಣ್ಗೊಳಿಸಿ ಮನಂಗರಗುತ್ತೆ,

ಮತ್ತಂ ಕಿಱಿದುಂ ದೂರಂ ನಡೆದಾಯೆಡೆಯೊಳ್ ಸಮಿತ್ಕುಶ ಕುಸುಮಂಗಳಂ ಸಂಗ್ರಹಿಸುವೆಡೆಯೊಳಮುಟೀಯದಂತುಪಾಧ್ಯಾಯ ರೊಡನೋದುತ್ತೆ ಬರ್ಪ ಪಟುವಟುಗಳ ವೇದಘೋಷಮೆಂಬ ಮಂಗ ಳತೂರ್ಯರವಂಬೆರಸು ಗಿರಿಯೇಱಿ ಶ್ರೀ**ನಾರಾಯಣಪುರ**ದ್ವಾರಮಂ ಸಾರ್ದು

— ಮೇಲ್ಕೋಟೆಯ ಪ್ರವೇಶ —

ಅಲ್ಲಿ ಮಹಾರಾಜಂ ಬಂದನೆಂದು ಕೇಳ್ದೆಟ್ದೆರ್ತರದೊಳ್ಬಿತ್ತರದಿಂ ಪಱತೆಗೊಂಡು ನಿಂದು ವಂದನಂಗೆಯ್ವ ಪೆರ್ಬಾಗಿಲ ಕಾಪಿನ ಕೂರಾಳ್ಗ ಳೊಗ್ಗುಗಳ ಗುಱಿನಾನಿಸರ್ಪಸಗೊಂಡು ಉಗ್ಗಡಿಪ ಕೈವಾರಿಗಳ ಕೈವಾರಮನಾಲಿಸುತ್ತೆ ಆ ಆ ಪಡೆವಳರೊಳ್ಪಡೆಗಣ್ಬೆಳಗಂ ಕವಿಸಿ ಮನ್ನಿಸಿ ಒಳಪೊಕ್ಕು ನಡೆಯುತ್ತೆ

ಅಲ್ಲಿ ತಮ್ಮ ಸಿರಿಗಣ್ಗಳ ತಣ್ಗದಿರ್ಗಳಿಂದಲರ್ವಟಿಗಱವಂತೆ ಯುಂ, ಪರಕೆವೆರಸಿದೊಳ್ವಾತುಗಳಿಂದಿನಿರಸದ ಸರಿಯುಂ ಸುರಿವಂತೆ ಯುಂ, ಅಟ್ಟಿರ್ವೆರಸು ಯೋಗಕ್ಷೇಮಂಗಳಂ ಬೆಸಗೊಳ್ವ ಸ್ನೆಪಿಂ ಸಂತಸಗಡಲ್ದೆರೆಗಳಂ ತಿಂತಿಣಿಗೊಳಿಸುವಂತೆಯುಂ ಪತ್ತೆಸಾರ್ವ ಸಾತ್ವಿಕರ ವೊತ್ತಮನಡಿಗಡಿಗೆ ಪೊಡೆಮಡುತ್ತುಂ, ತಡೆದು ತಡೆದೊಂದೊಂದಡಿ ಯಿಡುತ್ತುಂ, ಸಿರಿಯರಸನುಕ್ಕೈವದೊಳ್ಪಲವರ್ಪ ಸಿರಿವೀದಿಯಂ ಸಾರ್ದು,

— ಸಿರಿವೀದಿಯಲ್ಲಿ ವಾಸಮಾಡುವ ಶ್ರೀವೈಷ್ಣವರ ವರ್ಣನೆ —

ಅಲ್ಲಿ ಶ್ರೀನಾರಾಯಣನ ಸಿರಿಯಡಿಯಾಳ್ಗಳ್ಗೆ ತಕ್ಕರನೀರೇೞುಂ ಜಗದೊಳಗಱಸಿ ತಂದೊಂದುಗೊಳಿಸಿದಂತೆಯುಂ, ಪರಮಪದದೊಳರಿದಪ್ಪ ಸೌಲಭ್ಯಗುಣಮನರ್ಚಾವತಾರದೊಳನುಭವಿಸಲ್ವೆಂದು ಬಂದು ನಿತ್ಯಸೂರಿಗಳ್ನೆರೆದಂತೆಯುಂ, ರಾಜಸನೆನಿಸುವಲರಿಚನನೆಡೆಯೊಳ್ನಿಲಿಸದೆ ವಾಸುದೇವಂ ತಾನೆ ಸಮೆಂದ ಸತ್ವಮಯಮಾದ ಸೃಷ್ಟಿ ಬೆಟ್ಟತ್ತಾದಂತೆಯುಂ, ಕಲಿಯುಗಂ ಪುಗದ ನೆಲನೆಂಬ ನಂಬುಗೆಯಿಂ ಪಲವುಂ ನಾಡ ಸಿರಿಯರ್ಕೈತಂದು ಸಂದಣಿಸಿದಂತೆಯುಂ, ಐವತ್ತಾಱುಂ ನಾಡೊಳಿಡಿದ ಪರವಾದಿಗಳಂ ಗೆಲಲ್ಕೆ ಪೂಣ್ದ ಯತಿರಾಜಂಗೆ ಬೆಂಬಲಮಾಗಿ ವಿಷ್ವಕ್ಸೇನರ ಸೇನೆ ಸನ್ನಿದಮಾದಂತೆಯುಂ, ಬೆಳ್ದೀವಿಯ ಸಿರಿ ಪೆಂಪುವಡೆದಂತೆಯುಂ, ಪರಮಪದದ್ವೈಸಿರಿ ಪಸರಿಸಿದಂತೆಯುಂ ತಿಂತಿಣಿಸಿ, ತಮ್ಮ ಬಗೆಗೊಂಡ ಬಿನ್ನಣದ ಬೆಳಗು ಪೊಱಪೊಣ್ಮಿದಂತೆ ಮಿಸುಪ ಮೊಗಸಿರಿಯಿಂ ದೆಸೆಗಳಂ ತೊಳಗಿಸುತ್ತುಂ, ಮುರ್ಬನೆಬ್ಬಿಟ್ಟುತ್ತುಂ, ಸತ್ವದಿಂ ಸಮೆದಂತೆಯುಂ, ನೇಮದಿಂ ನೆಗೞ್ದದಂತೆಯುಂ, ಬಿನಯದಿಂ ಬಿತ್ತರಿಸಿದಂತೆಯುಂ, ಬಿನ್ನಣದಿಂ ಬಣ್ಣಿವಿಟ್ಟಂತೆಯುಂ, ಒಳ್ನಡತೆಯಿಂದೊಪ್ಪಂಬಡಿಸಿದಂತೆಯುಂ, ತಾಳ್ಮೆಯಿಂ ನಿರ್ಮಿರ್ಚಿದಂತೆಯುಂ, ಓಜೆಯಿಂದೊಡರಿಸಿದಂತೆಯುಂ, ಪುಣ್ಯದಿಂ ಪೊಣ್ಮಿಸಿದಂತೆಯುಂ, ಜಸದಿಂ ಜನಿಯಿಸಿದಂತೆಯುಂ, ಧರ್ಮಮಯಮೆನಿಸಿ, ದಯಾಮಯಮೆನಿಸಿ, ದಾಕ್ಷಿಣ್ಯಮಯಮೆನಿಸಿ, ಸತ್ವಮಯಮೆನಿಸಿ, ಶಾಂತಿಮಯಮೆನಿಸಿ ಪರಭಕ್ತಿನಿಷ್ಣಾತರಪ್ಪ ಶ್ರೀವೈಷ್ಣವರಂ ನಿರವಿಸಿದಂ.

ಮತ್ತಮವರ್ಗೆಲ್ಲಿಯುಂ ರಾಗದ್ವೇಷಮಿಲ್ಲದುದಱಿಂದಾವಗಂ ಪೊಗರೇೞ್ ತಣ್ಪುವಡೆದಿರ್ಪ ಸಿರಿಮೊಗಂಗಳಿಂದೆ ಒರ್ಮೆಯುಂ ಬೆಂಕಿಯುಂ ನೇಸಱುಂ ಸೋಂಕದ ಪೊಸವಗೆಯ ಪಲಸಾಸಿರ್ಸಂಕೆಯ ಸಸಿವಟ್ಟುಗಳಂ, ನುಣ್ಬಣೆಯೊಳೆಸೆವ ಸಿರಿವಣ್ಬೆಳಗುಗಳಿಂದೆ ಪೂತು ಪೊದೆದ್ದ ಬೆಳ್ದಾವರೆಗಳಂ, ಎಡೆವಿಡದೆ ದಿವ್ಯಪ್ರಬಂಧಂಗಳನನುಸಂಧಿಪನ್ನಂ ಪೊಱಸೂ

ಸುವ ದಂತಕಾಂತಿಗಳಿಂ ಚಿತ್ತದೊಳ್ಪತ್ತಿ ಬಿತ್ತರಂಬೆತ್ತ ಸತ್ವಗುಣಮುಂ, ಸಿರಿಗೊರಲ್ಗೆ ಧರಿಸಿದ ತೊಳಚಿತಾವರೆಮಣಿಸರಂಗಳಿಂ ದಿವ್ಯಾಂಗದೊಳ ಗಜಾಂಡಮಂಡಳಕೋಟಿಯುಂ ಪೊತ್ತ ಪುರುಷೋತ್ತಮನ ಸಾರೂಪ್ಯಮುಂ, ಪೊದೆದ ದುಗುಲದ ತೆರೆಗಳಿಂದೆರ್ದೆಗೊಂಡ ಪುಂಡರೀಕಾಕ್ಷನಂ ತೊಡರ್ದ ಪಾಲ್ಗಡಲ ಪಡಿನೆಬಿಲಂ ಬಗೆಗೊಳಿಸಿದರ್.

ಮತ್ತಮವರ್ಗೆ ವರ್ಣಾಶ್ರಮಧರ್ಮಾಚರಣದೊಳ್ಪಾವಮುಮುಂ, ಅದಱಿಂದಾನುಷಂಗಿಕಮಾಗಿ ಬರ್ಪ ತ್ರೈವರ್ಗಿಕಫಲದೊಳ್ಕ್ರೋಧಮುಮುಂ, ಅದಱಿಂದೊಗೆವ ಭಗವನ್ಮುಖೋಲ್ಲಾಸದೊಳ್ ಲೋಭಮುಮುಂ, ತದನುಭವಜನಿತ ಪ್ರೀತಿಯೊಳ್ಮೋಹಮುಮುಂ, ಪ್ರೀತಿಕಾರಿತ ಕೈಂಕರ್ಯಲಾಭದೊಳ್ಮದಮುಮುಂ, ಮದಜನಿತಕೈಂಕರ್ಯವಿಘ್ನದೊಳ್ಮಾತ್ಸರ್ಯಮುಮುಂ, ಪೂರ್ವಪಕ್ಷೋಪನ್ಯಾಸದೊಳ್ ಮಿಥ್ಯಾವಾದಮುಮುಂ, ಸ್ತೋಭದೊಳನರ್ಥಕವಚನಮುಮುಂ, ಇಂದ್ರಿಯನಿಗ್ರಹದೊಳಾಗ್ರಹಮುಮುಂ, ಬುದ್ಧಿಯೊಳ್ತೈಕ್ಷ್ಣ್ಯಮುಮುಂ ಸಮನಿಸಿರ್ಕುಂ। ಮತ್ತಂ ಬಿಜ್ಜೆಯೆ ರಾಜ್ಯಮುಮುಂ, ಬಿನಯಮೆ ಧನಮುಮುಂ, ವೈರಾಗ್ಯಮೆ ಭಾಗ್ಯಮುಮುಂ, ಸೈರಣೆಯೆ ಬೀರಮುಮುಂ, ಸತ್ಯಮೆ ನೆರವುಂ, ಬಿನ್ನಣಮೆ ಬೆಂಬಲಮುಮುಂ, ವಿವೇಕಮೆ ಕಾಪುಂ, ನೇಮಮೆ ಸೇಮಮುಮುಂ, ಒಳ್ಪೆ ಬಲ್ಪುಂ, ಸಂತಸಮೆ ಸಾಮ್ರಾಜ್ಯಮುಮಾಗಿರ್ಕುಂ। ನಿಚ್ಚಲುಂ ಭಗವನ್ನಿವೇದನದ್ರವ್ಯೋಪಾದಾನಕಾಲದೊಳ್ ಬೆಳೆ ಕಱಿದ ಬೆಳೆಗೆಯ್ಯೊಳುದಿರ್ದ ಧಾನ್ಯಕಣಂಗಳನಂದಂದಿಂಗೆ ತಕ್ಕುದನಲ್ಲದೆ ಮಿಕ್ಕೊಂದು ಕಾಳನಾದೊಡಮಾಯ್ದುಕೊಳ್ವುದು ಕಟ್ಪಾಸೆಯೆನಿಪುದು। ಇಜ್ಯಾಕಾಲದೊಳ್ ಪ್ರಸಾದಪ್ರತಿಪತ್ತಿಗೆಯ್ಯುತ್ತೆ ಸವಿಭಾವಿಪುದು ವಿಷಯಾಭಿಲಾಷೆಯೆನಿಪುದು। ಉಭಯವೇದಾಂತಂಗಳನೋದುವೆಡೆಯೊಳ್ ಪೆಱತೊರ್ಮೆ ಕೇಳ್ದು ಅರ್ಥನಿಶ್ಚಯಂಗೆಯ್ವುದು ಬುದ್ಧಿಮಾಂದ್ಯಮೆನಿಪುದು। ಸ್ವಯಂಪ್ರಯೋಜನಮಾಗಿ ತಾಮೆಸಗುವ ಕರ್ಮಜ್ಞಾನಭಕ್ತ್ಯಾದಿಗಳೊಳ್ ಸಾಧನಬುದ್ಧಿಗೆಯ್ವುದು ವೈಶಿಕಮುಪ್ಪುದು। ನಿಷೇಧಿಸುವುದ

ರ್ಕವೂವೆನ್ನದೆಂದನುವದಿಪುದವಾಚ್ಯವಾದವೆನಿಪುದು । ಭಗವದ್ಗುಣ ಗಣನೆಯೊಳಂ ಗೃಹಕ್ಷೇತ್ರಪುತ್ರಪಶ್ವಾದಿಕ್ಷುದ್ರಫಲಂಗಳನೀವನೆಂದು ಪೊಗಟ್ದುದು ಲಜ್ಜಾವಹವುಪ್ಪುದು। ಅನ್ಯೋನ್ಯವಂದನದೊಳೊಂದಿನಿಸು ಪಿಂಚುವುದುಂ ಗರ್ವವೆನಿಸಿ ನಿರ್ವೇದಕಾರಣವುಪ್ಪುದು । ಅರ್ಥಿಸಿ ಬಂದ ಶಿಷ್ಯಸಾರ್ಥಮನೊಂದೆರಟ್ಟೂಟಿಟಿಚೂಳ್ ಕಡೆಗಣಿಸದೆ ದಯೆದಿಂದಂ ಗೀಕರಿಪುದು ಖ್ಯಾತಿಲಾಭಪೂಜಾರ್ಥವೆನಿಪುದು। ಸಚ್ಛಿಷ್ಯನಂ ಪರವು ಭಾಗವತನೆಂದುಂ ಶ್ರೀವೈಷ್ಣವನೆಂದುಂ ಸಿರಿವೆಸಗೊರ್ಳ್ಳದೆ ತನ್ನ ಶಿಷ್ಯನೆಂದುಸಿರ್ವುದು ವಾಕ್ಪಾರುಷ್ಯವುಪ್ಪುದು । ಮತ್ತಮವರ್ ತಮ್ಮ ಮನೆಯನವನ ದೇಗುಲವೆಂದುಂ, ಮಡದಿಮಕ್ಕಳನವನೂಳಿಗದವರೆಂದುಂ, ಪುರುಳನವನೊಡವೆಯೆಂದುಂ, ಗೃಹೋಪಕರಣಮನವನ ಪೂಜೋಪಕರಣವೆಂದುಂ, ತಮ್ಮನವನ ಪೂಜಕರೆಂದುಂ, ತಮ್ಮ ಮನೋವೃತ್ತಿಯನಿತುಮವನ ನೆನಪೆಂದುಂ, ತಮ್ಮ ನುಡಿಯನಿತುಮವನ ಪೊಗಟ್ತೆಯೆಂದುಂ, ತಮ್ಮಗೆಯ್ಮೆಯನಿತುಮವನೂಳಿಗವೆಂದುಂ, ಅವನೊಲ್ಮೆ ತಮಗೆ ಧಾರಕವೆಂದುಂ, ಅವನ ಗುಣಾನುಭವವೆ ತಮಗೆ ಪೋಷಕವೆಂದುಂ, ಅವನ ಸೇವೆಯೆ ತಮಗೆ ಭೋಗ್ಯವೆಂದುಮೆಣಿಸಿರ್ಪರ್.

ಇಂತಿರ್ಪ ದೇಶಿಕರ ನೆಜವಿವೆರಸು ಶ್ರೀಗೋಪುರದ್ವಾರಮಂ ಸಾರ್ದು ಸಾಷ್ಟಾಂಗಪ್ರಣಾಮಂಗೆಯ್ದೊಳಪೊಕ್ಕು ನಡೆದು ಅಲ್ಲಿ ಸಿರಿಬಲ್ಲಹನೂಳಿಗದೊಳ್, ತವಕಿಗರ್ ತಮ್ಮೊಳ್ತಾಂ ನುಡಿವ ಸಿರಿವಾತುಗಳಂ ಕೇಳ್ವನದಂತೆನೆ :—

— ದೇವಸ್ಥಾನದ ಗೋಪುರದ್ವಾರದಲ್ಲಿ ಸೇವಾತವಕಿಗಳ ಸಿರಿವಾತುಗಳು ಮತ್ತು ಅಷ್ಟತೀರ್ಥಗಳ ವರ್ಣನೆ —

ಶ್ರೀಮಜ್ಜನಮಂ ತರಲ್ಕೆಂದು ತನ್ನಿಂ ತಾನೆ ಮಿಂದು ಬಂದ ಕಾಡಾನೆಯ ಮೊಗದೊಳ್ಸಿರಿವಣ್ಣಂ ಸಮನಿಸೆಂದುಂ, ಶ್ರೀಕಲ್ಯಾಣೀತೀರ್ಥದೊಳ್ಮಿಂ ಸುಚರಿತಂ ಸುರಸರಿತ್ಪೂರದಿಂದೆಟ್ಟು ಪೊಜಿವುಟ್ಟ ನೀರ್ವಟ್ಟೆಯ

ಬಾಯ್ವರೆಗಂ ಮುಟುಂಗಿ ನೆಗಪಿ ನೀಡುವ ನೀರಾನೆಯ ಬಱಿಕೆಯ್ಯೊಳಿಸೆವ ಪೊಂದಂಬಿಗೆಯ ತೀರ್ಥಮನೆ ತರ್ಪುದೆಂದುಂ, ದರ್ಭತೀರ್ಥದ ತೀರದೊಳುದ್ಭವಿಸಿದ ದರ್ಭೆಗಳಿಂ ಸಮೆದ ಸಿರಿವಜಲ್ಗಳಿಂ ಸಿರಿಯಂಗಳದ ಮೇಲ್ಕಟ್ಟಿನ ಲಂಬಣಸರಂಗಗಳಿಂದುದಿರ್ದು ಪರಮಭಾಗವತರಡಿದೂಳ್ಗಳಿಂ ಬಳೆದಲರ್ವುಡಿಯಂ ಗುಡಿಸಿ ಬೈತಿಡುವುದೆಂದುಂ, ಅಂದು ಸನಕಾದಿಗಳ್ ಮಂದಾಕಿನಿಯೊಳ್ಕಱಿಗೞಿದು ತಂದ ಪೊಂದುಗುಲಂಗಳಂ ಜಡೆಗಾಡಂ ಪೊಡೆಯೆಡೆಯಂ ಬೂದಿವೆಟ್ಟಂ ಮುಟ್ಟಿ ಮೀಸಲೞಿಯದ ವೈಕುಂಠಗಂಗೆಯೊಳ್ಮಡಿಮಾಳ್ಪುದೆಂದುಂ, ಸಿರಿವಣ್ಗಣಿಯೊಳ್ಮುಂ ತಾರ್ಕ್ಷ್ಯಂ ತಂದು ನಿಕ್ಷೇಪಿಸಿದ ತಾಯ್ವಣ್ಣನೆ ತಂದನುಗೆಯ್ವುದೆಂದುಂ, ನಯನ ನಾರಾಹ ಸೀತಾರಣ್ಯಾದಿ ಪುಣ್ಯಕ್ಷೇತ್ರಂಗಳೊಳ್ಬೆಳೆದೆಳದೆನೆದಳೆದ ತುಳಸಿಯ ಪೊಸಗೊನೆಗಳನೆ ಸಾಸಿರ್ವೆಸರ ಪೂಜೆಗೆ ಮೀಸಲಿಡಿಸುವುದೆಂದುಂ, ನೇಮಂ ಬೆರಸು ತಿಱಿವ ಭಾಗವತರನುಸಂಧಿಪ ದಿವ್ಯಪ್ರಬಂಧಗಂಧಬಂಧುರಮಪ್ಪ ಮಲರ್ಗಳನೆ ತರವೇಳ್ಪುದೆಂದುಂ, ಮುಂ ಪ್ರಹ್ಲಾದಂ ಬಿತ್ತಿದ ನೃಸಿಂಹಶೃಂಗದೊತ್ತಿನ ಬಾವನ್ನಗಾಡ ಪಟಿವರದೊಣಗೊಂಬಿನ ಚೇಗಿನೊಳಣ್ಪಂ ಸಂಪಾದಿಪುದೆಂದುಂ, ಅಂದು ವನವಾಸದಶೆಯ ಬೇಸಗೆಯೊಳ್ನೀರೆಳಸಿದ ತನ್ನಿರವನಾರಯ್ದು ರಘುವೀರಂ ಬಿಲ್ಗೊಂಬಿನಿಂದಿಱಿದಱಯೊಳ್ಪೊಣ್ಮಿದ ತಿಳಿನೀರ್ಸರಿಯೊಳ್ಮಿಂದ ಸೀತಾದೇವಿಯ ಸಿರಿಯೊಡಲ ಕುಂಕುಮದಿಂ ಪೊಂಬಣ್ಣಮಾದ ಧನುಷ್ಕೋಟಿತೀರ್ಥೋದಕದಿಂ ಸಿರಿರಾಣಿಗರಿಸಿನದಣ್ಪಂ ಬಣ್ಣಂಬಡಿಪುದೆಂದುಂ, ಅತ್ರಿಕುಮಾರಂ ದತ್ತಮುನಿಯುತ್ತಮಾಶ್ರಮದೊಳ್ಪೊತ್ತ ಪೊಸಗಾವಿಯುಡೆಯನಟ್ಟಿದುದಱಿಂ ಕಿಱುಗೆಂಪಾದ ವೇದಪುಷ್ಕರಣಿಯುದಕದಿಂ ರಾಮಾನುಜಾಚಾರ್ಯರ ದುಗುಲಮಂ ತಳಿರ್ಗಾವಿಗೆಯ್ವುದೆಂದುಂ, ಪದ್ಮತೀರ್ಥದ ಮಧ್ಯದೊಳ್ಪೊದಟ್ಟಿ ಪೊಂದಾವರೆಯ ಪೊಸದಂಟುಗಳ ಎಸಟ್ಗಳಿಂದಾಲತಿವತ್ತಿಯಂ ಬಿತ್ತರಿಪುದೆಂದುಂ, ಮುನ್ನಂಬರೀಷಾದಿಗಳ್ಪೈವಭಾರ್ಗವತರ್ ಅಡಿದೊಳೆದ

ತೀರ್ಥದೊಳೀೞ್ಗವಡೆದ ಬಿನ್ನಣದ ಅರಳಿವರದೊಳಿ ನಿತ್ಯಹೋಮ ಸವಿತ್ಸಂಗ್ರಹಣಂಗೆಯ್ವುದೆಂದುಂ, ಯದುಶೇಖರ ಶೂರ ವಸುದೇವ ರಾಮ ಕೃಷ್ಣಾದಿಗಳ್ಪಲರ್ವೆ ಬಂದು ಮಿಂದಿರ್ಪಡಿಯೊಳ್ಪಲವುಂ ಜನ್ಮಂಗಳುಂ ಪದಿನಾಱುಂ ದಾನಂಗಳನೆಸಗಿದುದಱಿಂದದೆ ನಿರೂಪಕಮಾದ ಯಾದವತೀರ್ಥದ ಪರಿಕಾಲ್ಗಳಿಂ ಬೆಳೆದ ಕಲಿವೆಯುಂ ಪತ್ತುಂ ಸೂೞಿಸೂಳ್ಮಿತ್ತು ಅಡಿಗೆ ವನೆಯೊಳಾಯತ್ತಂಗೆಯ್ವುದೆಂದುಂ, ವ್ಯೈತ್ರೆಯೊತ್ತಿನ ತೀರ್ಥಸಂಗ್ರಹಣ ವೃತ್ತಿನೊಳೊಡರ್ಚಿದ ಕೋಶಂಗಳೊಳ್ ನಾರಾಯಣತೀರ್ಥೋದಕಮ ನೆಸರೆತ್ತುವುದೆಂದುಂ, ಹೀರೆ ಸೋರೆ ಮುಂತಾದುವಂ ಬಿತ್ತಿದ ಕಾಯ್ತೋಂಟ ದೊಳ್ಬೆಳೆದ ಪಡಲ ಹಾಗಲಂ ಮೊದಲಾದೊಳ್ಗಾಯ್ಗಳುಮಂ ಕಳೆವುದೆಂದುಂ, ಸಂಕುಸಾಱುಂಬಳೆಗಳಿಂದಂಕಿತಮಾಗದ ಬಱುದುಱುಗಳಂ ಕಱೆಯದುಟುಪುದೆಂದುಂ, ಕಱುವುಂಡ ಮೊಲೆಯುಂ ಪಲರ್ವೆ ತೊಳೆದು ಕಪಿಲೆಯುಂ ಕಱೆವುದೆಂದುಂ, ಎಳಸಿಸುತನದೊಳಿಸೆವ ಮುಂಗಾರ ಮುಗಿಲ ವಣ್ಣನ ಬಣ್ಣನಾಡಂ ಪಾಡದ ಕಾಟಿಸ್ವಂಡಿರ್ ಕಡೆದ ಬೆಣ್ಣೆಯುಂ ಕಡೆಗಣಿಪುದೆಂದುಂ, ಎನಿತಾನುಮೊಳ್ಪುವಡೆದುಪಕರಣಂಗಳುಮಂ ವೇಳೆ ವೇಳೆಗಂ ಮೂಲಮಂತ್ರಸಂಹಾರನ್ಯಾಸತಂತ್ರದಿಂ ಪ್ರಾಕೃತರೂಪಮಂ ಕಳೆದು ಸೃಷ್ಟಿನ್ಯಾಸದೊಳ್ಪೊಸವುಟ್ಟುಗೊಳಿಪುದೆಂದುಂ, ಪಲನುಡಿಗಳಿಂ ಫಲಮೇನವನ ಭಕ್ತಿಯೊಂದಱಿಸೂಳೆ ಪಲವುಂ ವಸ್ತುಗಳುಮಂಗಿನಿದೆನಿಪುದೆಂದುಂ—ಇಂತು •ನುಡಿವ ಪಲವುಮೊಳ್ನುಡಿಗಳಂ ಕೇಳುತೊಳ ಪಾಗಲಂ ಬಲವರುತ್ತ—

— ದೇವಸ್ಥಾನದ ವರ್ಣನೆ —

—ದೇವಸ್ಥಾನದ ಒಳಪಾಗಲಂ ಬಲವರುತ್ತ ದರ್ಶನಮಾಡಿದ

೧—ಶ್ರೀವತ್ಸಾಂಕರ ವರ್ಣನೆ—

ಅಲ್ಲಿ ತೇಜೋವಿಶೇಷದಿಂ ನೆಲದೊಳುದಿಸಿದ ನೇಸಱಂತೆಯುಂ, ಮೆಯ್ವೆತ್ತ ಸಪ್ತಾರ್ಚಿಯಂತೆಯುಂ, ಕಾಂತಿಯಿಂ ತುಂಬುವೆಱೆಯಂತೆ

ಯುಂ ಮೆಱೆವ ವಾದಾಹವನಿಶ್ಶಂಕರಪ್ಪ **ಶ್ರೀವತ್ಸಾಂಕರಂ** ಪೊಡೆಮಟ್ಟು ನಿಟ್ಟಿಸಿ ಮನದೊಳಿಣಿಸಿದಂ:—ಈದೇಶಿಕರಾಣ್ಮಂ ತಾಳ್ಮೆಯೊಳ್ಪೊಡವಿಯು ಮಾಱಿದೊಳ್ಮನ್ನೀರಂ ನಿಸ್ಸಂಗದೊಳೆಲರಂ ನಿರ್ಲೇಪತೆಯೊಳಾಗಸಮಂ ಸಮಂಗೊಂಡಿರ್ಪಂ. ಮತ್ತಮಿವನ ಗರ್ವದೇೞ್ಗೆ ದುರ್ಜ್ಞೇಯಮ ಪ್ಪುದು. ಮುಂ ಬಾಸೆವತ್ತೞೆಯಂ ಬರೆಯಿಸಲೆಳಸಿದ ಚೋೞನ ಗರ್ವ ದೊಡನೆ ಶರ್ವನೊಳ್ಪತ್ತಿಸುವ ಪರತ್ವಮನಿೞಕೆಗೆಯ್ದಂ. ಮತ್ತಮಾಕೂರ ಕುಲವಲ್ಲಭನೆಲ್ಲಾಪುರುಳ್ಗಳನಂಗೆಯ್ಯ ನೆಲ್ಲಿಯುಮೋಲಿೞದಿರ್ಕುಂ. ಅಲ್ಲ ದೊಡಾ**ಭಾಷ್ಯಕಾರಂ** ಶ್ರೀಭಾಷ್ಯರಚನೆಯೊಳ್ ಇವನನೇತರ್ಕೆ ನೆರಂ ಗೊಂಡಂ!--ಎಂದೆಣಿಸಿ ದಂಡಪ್ರಣಾಮಂಗೆಯ್ದು ಮುಂತಣ್ಗೆ ನಡೆಯುತ್ತೆ,

— ಪನ್ನಿರಾೞ್ವರ ವರ್ಣನೆ —

ಅಲ್ಲಿ ಮುಂ ಸಿರಿಗೋವಲೂರೊಳ್ ಭಾಗವತನೊರ್ವನ ಕಿಱು ವನೆಯೊಳಿಟ್ಟಣಿಸಿ ನಿಂದುಂ ತಂತಮ್ಮ ನಿರ್ಬನ್ಧಮಂ ಬಗೆಗೊಳಿಸದೆ ಸಂತಸ ಮಿರ್ಪ ಸೌಜನ್ಯಮಂ ತಾನುಮನುಭವಿಸಲ್ಬೆಳಸಿ ಕೞ್ತಲೆಯೊಳ್ ಬಂದು ಪೊಕ್ಕ ಮುಕುಂದಂಗೆ ನೇಸಱಂ ಜ್ಞಾನಮಂ ಸೊಡರ್ಗೆಯ್ದು ಸಿರಿಮೆ ಯ್ಯಂ ಕಣ್ಗೊಳಿಸಿ ಜಸಂಬೆತ್ತ ಮೊತ್ತಮೊದಲ ಮೂಱುಂ **ಸೂರಿ**ಗಳುಂ। ಸೂಜಿಯುಂ ಬೞಿವಿಡಿದು ದಾರಂ ಬರ್ಪಂತೆ ಕರುಣಿಪುದೆಂದು ವರಮಂ ಬೇಡಿ ಮೃಡನಂ ವಿಡಂಬಿಸಿ ಕಡೆಗಣಿಸಿದ ವೈರಾಗ್ಯಸಾರಂಬೆತ್ತ **ಭಕ್ತಿ ಸಾರ**ನುಂ। ಪುಟ್ಟಿದಂದುಮೊದಲ್ ತಾಯ ಮೊಲೆವಾಲಂ ಮುಟ್ಟದೆ ಭಗ ವದ್ಗುಣಾನುಭವಮೆ ತನಗೆ ಧಾರಕಪೋಷಕಭೋಗ್ಯಮಾಗಿ ಬಳೆದೇೞ್ಗೆವಡೆದ **ಶಠಕೋಪ**ನುಂ। ಶ್ರೀವೈಷ್ಣವರ್ ಕಳವುಗೊಂಬರಲ್ತೆಂಬ ನಂಬುಗೆಯಿಂ ಪಾವುಗೊಡದೊಳ್ ಕೆಯ್ಯಿಟ್ಟು ಗೆಲ್ದು ಭಾಗವತಕುಲಶೇಖರನೆನಿಸಿದ **ಕುಲಶೇಖರ**ನುಂ। ಪಾಂಡ್ಯಸಭೆಯೊಳ್ ಪರವಾದಿಗಳಂ ಜಯಿಸಿ ಹರಿಯೇ ಪರತತ್ತ್ವಮೆಂದು ನೆಲೆಗೊಳಿಸಿ ಮೆಯ್ಮೆವೆತ್ತ **ವಿಷ್ಣುಚಿತ್ತ**ನುಂ। ಪಸಿದು ಬಸವೞಿದಿರ್ಪ ಧೆಸೆಯೊಳ್ ಶ್ರೀರಂಗನಾಥಂ ವಟುರೂಪದೊಳ್ಪೊತ್ತು

ತಂದಿತ್ತು ನೈವೇದ್ಯದ ಪೊಂದಟ್ಟೆಯುಮ್ಮೃತಾನ್ನಮುಂ ಸವಿದು ಸತ್ವಶುದ್ಧಿ ವೆತ್ತ **ಭಕ್ತಾಂಘ್ರಿರೇಣು**ವುಂ। ಸಿರಿಯುರಸನಡಿವಿಡಿದು ಮುಡಿವರೆಗಂ ನಿರವಿಸಿ ನಿಟ್ಟಿಸಿದ ಕಣ್ಗಳಿಂ ಪೆಱತೊಂದುಮಂ ನಿಟ್ಟಿಸೆನೆಂದು ನುಡಿದಂತೆ ನಿರ್ವಹಿಸಿದ **ಮುನಿವಾಹನ**ನುಂ। ತನ್ನ ವಲ್ಲಭೆಯುಪ್ಪ **ಕುಮುದವಲ್ಲಿ** ಯಾಣತಿಯಿಂ ಗೆಯ್ವ ತದೀಯಾರಾಧನಕ್ಕೆ ತಕ್ಕ ಪೊನ್ನೊಡಖಂಡಯುದ ಬಲ್ಪಿಂದವೆ ಮೂಲಮಂತ್ರಮಂ ಕೊಂಡೆಸೆವ **ಪರಕಾಲ**ನುಂ। ಎಳವೆಯ್ಯೊಳೆ ಬಿನ್ನಣಂ ಪಣ್ತುದಱಿಂದರ್ಚಾವತಾರದೊಳಾಸಕ್ತಿ ಪುಟ್ಟೆ ಮುಂವಿಭವಾನುರಕ್ತಿಯುರಪ್ಪ ಗೋಪಿಯುರಂ ಕೀಟ್ಪಡಿಸಿ ನೆಗಟ್ದ **ಗೋದಾದೇವಿ**ಯುಂ। ತೆಂಕಲ್ಪೊಣ್ಮಿದ ನೇಸಱಂತೆ ತೋಱಿ ತನ್ನಂ ಬಸಂಗೆಯ್ದಾಳ್ದ **ಶಠಕೋಪರ** ಸಿರಿಯಡಿಗಳನುೞಿದು ಪೆಱತೊಂದನಱಿಯೆನೆಂದು ಆಚಾರ್ಯನಿಷ್ಠೆಯೊಳ್ ನೆಲಸಿ ನಿಂದ **ಮಧುರಕವಿಯುಂ**ಮೆಂಬೀಪನ್ನಿರ್ವರುಂ ದಿವ್ಯಸೂರಿಗಳಾವಗಮನಿತೂೞಿಗಂಗಳಂ ಗೆಯ್ವುದಱಿಂ ನಿರ್ಭರರಾಗಿ ತಾಮವನ ಗುಣಾನುಭವಂಗಳೊಳ್ಮಗ್ನರೆನಿಸಿ ಮೆಯ್ಮಱೆದಿರ್ಪ **ಪಾವು ಪಕ್ಕಿ ಪಡೆಯೊಱೆಯು**ರುಂ। ಮತ್ತಮೆಡಬಲದೊತ್ತಿನೊಳ್ಪುಳ್ಳಿರ್ದು ಉಳ್ಳ ಪೊೞ್ತಿಲ್ಲಮುಂ ತನ್ನ ಸ್ವರೂಪರೂಪಗುಣಂಗಳನನುಭವಿಸುತ್ತುಂ ತಣಿಯದೆ ಪೊಸಪೊಸತೆನಿಸಿ ಸವಿವ **ಸಿರಿ ಪೊಡವಿ ನೀಳೆ**ವಡದಿಯರುಂ ಬೆರಸು ಪಿರಿಯೋಲಗಂಗೊಂಬ **ಪರವಾಸುದೇವ**ರ ಠೀವಿಯುಂ ನಿರವಿಸಿ ಕವಿವಾಸೆಯುಚ್ಚಾರಿನುಱವೆಯೆಟ್ಟುಱಿಟ್ಕುಱಾನಂದಂಗಳ ತೆರೆಗಳೊಳ್ ತೇಲ್ವ ಬಗೆಯಂ ಪದುಳಂಗೊಳಿಸಿ ಸಾಷ್ಟಾಂಗಮೆಱಗಿ ಕಿಱಿದುಂ ದೂರಂ ನಡೆದು —

೩— ಸುದರ್ಶನ, ಕಾಂಚೀಪೂರ್ಣರ ವರ್ಣನೆ —

ಅಲ್ಲಿ ಚಂಚಲತೆಯನುೞಿದು ಮಿಂಚುವಳ್ಳಿಗಳ್ ಪುಂಜಮಾದಂತೆಯುಂ, ನಟ್ಟನಡುವಗಲ್ಗೆ ಬಂದ ಬೇಸಗೆಯ ನೇಸರ್ವಟ್ಟನಂತೆಯುಂ ನಿಟ್ಟಿಸಲರಿದೆನಿಸಿದ ಅಪ್ರಾಕೃತತೇಜೋಮಯಮಾದ **ಸುದರ್ಶನ**ರಂ

ದರ್ಶನಂಗೆಯ್ದು ಮಣಿದು ಆವೊತ್ತೆನೊಳ್ಸಕಲಕಲ್ಯಾಣಗುಣರಪ್ಪ **ಕಾಂಚೀಪೂರ್ಣ**ರಂ ನಮಿಸಿ, ಮುಂತಣ್ಗೆ ನಡೆದು —

ಳ— ಯದುಗಿರಿ ನಾಯಕಿಯ ವರ್ಣನೆ —

ಅಲ್ಲಿ ಮುಂ ಪಾಲ್ಗಡಲಿಂ ಪೊಱಮಡುವೆಡೆಯೊಳಡಿದೊಡರ್ದ ಪವಳಗುಡಿಗಳ ಪಾಂಗನಂಗೀಕರಿಸಿದ ಕೆಂಬರಲ್ಗಳುಂ, ಅವಱ ಕವಡು ಗೊನೆಯೊಳ್ಸಿಲ್ಕಿದ ಮುತ್ತುಗಳ ಬಿಡಯಮಂ ಬಿತ್ತರಿಪ ಬಟ್ಟುಗುರ್ಗಳುಂ, ಕೆಂದಾವರೆವನೆಯೊಳ್ ಬಂಡುಗೆಸಱಿಪೊಳ್ಪತ್ತಿದ ಪೊಸಎಸಟಿಂಬ ಸಂದೆ ಯಮಂ ಸಮನಿಸಿರ್ಪ ಕೆಂದಳಮುಂ, ಸಿರಿಯಡಿಯಲರ್ದಾವರೆಯಂ ಸುತ್ತಿಮುತ್ತಿದ ಬಂಡುಣಿವಿಂಡನಂಡಲೆವ ನೀಲದ ಪೆಂಡೆಯಮುಂ, ಬೆನ್ನೊಳ್ಬಂದ ಚಂದಿರನ ಬೆಳ್ಗದಿರ್ಮೆಯ್ಯೊಳ್ಪುದುಗಿದ ಸೊಗಸಂ ಬಗೆ ಗೊಳಿಪ ದುಗುಲಮುಂ, ಪೊಂಜೆಳೆಮೆಯ್ಯ ಕಿಱುಗುಡಿಗಳಲರ್ವಿಡಿ ದಳೆದು ಪರ್ಬಿ ಪಡಲ್ವಟ್ಟಂತಿರ್ಪ ಕಿಱುಗಂಟೆಗೆಜ್ಜೆಗಳಂ ತಳೆದ ಪೊಂಬಲೆ ಯುಡೆನೂಲುಂ, ಆಡಿಯುಮಂತಮುಮಿಲ್ಲೆಂಬ ವೇದದಂತೆ ಮಧ್ಯಮು ಮಿಲ್ಲೆಂಬೆಮ್ಮವಂದಿಗರ ನುಡಿಯಂ ನನ್ನಿಗೆಯ್ವ ಪುಯ್ಯುಡುವುಂ, ಸರ್ವ ಲೋಕಮಾತೆಯಪ್ಪ ತನ್ನ ಮಕ್ಕಳಂ ಪೊರೆಯಲ್ಕೆ ತಕ್ಕ ಪೆರ್ವೊಲೆಯುಂ, ಪೊರ್ದುಗೆಗೊಳಿಸಲ್ಕೆ ಚೇತನೇಶ್ವರರಿರ್ವರಂ ತಿರ್ದುವ ಪುರುಷಕಾರ ಕೃತ್ಯಮೆರಡಱಿಪೊಳಲ್ಕುಂ ತೀರ್ಚಿ ಬೇಟ್ಪ ಬಿನ್ನಣಂ ಮೊದಲಾದುವನಿತು ಭಕ್ತರನನುಗೊಳಿಪುದರ್ಕೆ ಭಯವರದಂಗಳೆರಡುಂ, ಕೋಪಮಂ ತಣ್ಪು ಗೊಳಿಸಿ ಕೃಪೆಯನೆಟ್ಟೆಱಿಸಿ ಈಶ್ವರನನನುಗೊಳಿಪುದರ್ಕೆ ತಕ್ಕ ಲೀಲಾ ಕಮಲವಹಂಗಳೆರಡುಮಾಗಿ ಪಚ್ಚುಗೊಂಡು ನಿರ್ವಹಿಪ ನಾಲ್ಕುಂ ಶ್ರೀಹಸ್ತಂಗಳುಂ, ತನ್ನ ಮಾಯಾಲೇಶದಿಂ ಮೂಱುಂ ಜಗಮಂ ಮೋ ಸಂಗೊಳಿಪ ಮುಕುಂದಂಗೆ ಮೋಹರಸಮಂ ಮುಳುಕುನೀರೆನಿಪ ಮುಗು ಳ್ನಗೆಯುಂ, ಸೊರ್ಕಿ ಪಕ್ಕದೊಳಿರ್ಪನಿಯನೊಳಂ ಬೆದಱುಗೊಂಡಿದಿರೊ ಳಿರ್ಪ ತನಯರೊಳಂ ತಱುನಾಯಿಂ ಪ್ರಣಯಕರುಣಾರಸಂಗಳ್ ಕರೆ

ಗಣ್ಮೆ ಕೊಂಕಿ ಕೂರ್ತು ಕುಡಿವರಿದುಂ ಕವಿದು ಕರಗಿ ಕದುಬುಗೊಂಡುಂ ತಣಿಯದ ನೋಟಂಗಳುಂ, ಪೆಣ್ತನದ ಸಾಜದಿಂದಮೆ ಆದೊಡಂ ಪುರುಷೋತ್ತಮನ ಚಿತ್ತಮನುನ್ಮತ್ತಂಗೆಯ್ದು ತನ್ನ ವೈಸಿರಿಯಂ ನಿಟ್ಟಿಸಲ್ಕೆಂ ಬಂತೆ ನಸುಮಣಿದ ಸಿರಿಮೊಗಮುಮಾದ **ಯದುಗಿರಿನಾಯಕಿಯ** ಸನ್ನಿಧಿಯಂ ಸಾರ್ದು ಸಾಷ್ಟಾಂಗಪ್ರಣಾಮಂಗೆಯ್ದೆಣಿಸಿದಂ :—

ಇವಳ್ಗಡ! ಪಾಲ್ಗಡಲನೇಱು ನೋಂಪಿಯ ಸಂಪದಮುಂ, ಕಮಲವನದೊಳ್ಗಂಪಿನ ಗುಂಪುಂ, ವನಮಾಲಿಯೆರ್ದೆವನೆಯೊಳ್ತೊಳಪ ಮಂಗಳರತ್ನದೀಪಮುಂ, ಪಟಿನುಡಿವೆಂಡಿರ ಬೈತಲೆಮಣಿಯುಂ, ಎಲ್ಲಾ ಲೋಗರುಕ್ಕೆವದ ಪಕ್ಕೆಯುಂ, ಎಮ್ಮ ಭಾಗ್ಯದೇೞ್ಗೆಯುಂ, ಮತ್ತಂ ಶೀಲದ ನೆಲೆವೀಡುಂ, ದಯೆಯ ತಾಯ್ಮನೆಯುಂ, ಚಾಗದಾಗರಮುಂ, ಬಿನ್ನಣದ ಬೆಳೆಗೆಯ್ಯುಂ, ಸೌಲಭ್ಯದ ಶಾಲೆಯುಂ, ಒಳ್ಪಿನೋದುವೞಿಯುಂ, ಒಳ್ನುಡಿಯ ಗುಡಿಯುಂ, ಮುಱುಕದ ಕರುನಾಡಮುಂ, ಪಸದನದ ಪಸರಮುಂ, ಗೆಲ್ಲದ ಗರುಡಿಯುಂ, ಚದುರ ಚೌಕಿಯುಂ, ಐಸಿರಿಯರಮನೆಯುಂ, ಸಂತಸದಂತವುರಮುಂ, ಸಕಲ ಸದ್ಗುಣಂಗಳ ಕಣಿಯುಮಾಗಿರ್ಪುದಱಿಂ ಎಱೆಯನ ಸಿರಿಯೆರ್ದೆಯಂ ಸೆಱೆಗೊಂಡುದಲ್ಲದೆ ಬಗೆಯುಮಂ ಬಂದಿವಿಡಿದಿರ್ಕುಂ. ಆ ಮಾಧವನುಮಿವಳ ತವರ್ಮನೆಯಂ ಮನಂಬುಗೆ ಪಾಲ್ಗಡಲನೊಳ್ಪುವಡಿಸಿರ್ಕುಂ. ಎಡೆವಿಡದಿವಳಂ ನಿಟ್ಟಿಸಿ ದಿಟ್ಟಿಯೊಳ್ಕೊಂಡಿರ್ಪುದಱಿಂ ಪದ್ಮಾಕ್ಷನೆನಿಸುಗುಂ. ಇವಳೊಡವುಟ್ಟೆಂದು ಚಂದಿರನಂ ಬಗೆದಂದಿರ್ಕುಂ. ಮಿಕ್ಕುದೇಂ? ಆವಗಂ ಜಗಮನೊಗಯಿಪ ಬಿಟ್ಟಿಗೆಯ್ಮೆ ಇವಳೊಲ್ದು ನಿಟ್ಟಿಪ ದಿಟ್ಟಿಯಿಂ ಸಫಲಮೆಂದೆನಿಸಿರ್ಕುಂ. ಅಱಿಯದಂ ಅಱಿವಂ ಆಱಂ ಆರ್ಪಂ ನಲ್ಲಂ ಪೊಲ್ಲಂ, ಬಡವಂ ಬಲ್ಲಿದನಾಳರಸನೆಂದು ಕಿಱಿದು ಪಿರಿದೆನಿಸಿ ಸೃಜಿಸುವಾಗಳಿವಳ ಕಟಾಕ್ಷತಾರತಮ್ಯವನೀಕ್ಷಿಸುತ್ತೆ ಸೃಜಿಸುವಂ. ದೇವರೊಳ್ ಪಿರಿಯರನಱಿಯದಱಿಸುವ ಪೊಸಯೋಗಿಗಳ್ಗೆ ತನ್ನೆರ್ದೆಯೊಳಿವಳಡಿಯಲತಿ

ಗೆಗುಱುಪಂ ತೋಱಿ ಪರತ್ವಮಂ ಪ್ರಕಟಿಸುವಂ. ಸಡಿಲ್ವ ಮುಡಿಯುಂ
ಸಱಿವ ಉಡೆತೊಡಿಗೆಗಳುಂ ಬೆಮರ್ವಂಗಮುಂ ಪೆರ್ಚುವ ಸುಯ್ಯೆಲರು
ಮಾಗಿ ಕಡಲಂ ಕಡೆವಾಗಳಾತ್ತಂ ಪಟ್ಟ ಪಾಡನಿತುಮಂ ಇವಳಂ ಪಡೆದ
ಸಂತಸಗಡಲ ಸೀರ್ಪನಿಯೊಳೆ ಕಳೆದಂ. ಪಾಲ್ಗಡಲ ನಡುಮಡುವಿನತ್ತಣಿಂ
ಗಮ್ಮನೆ ಪೊಣ್ಮುವಾಗಳಿವಳ ಮೊಗಸಿರಿಯುಂ ತೋಳ್ವಾಂಬಳ್ಳಿಗಳಂ
ಮೊಲೆಸೊದೆಗೊಡಂಗಳಂ ಕಣ್ಗೊಳಿಸಿ ಮುನ್ನೊಗೆದ ಸಸಿ ಬಾಂಬಳ್ಳಿ
ಸೊದೆಗೊಡಂಗಳನಿವರ್ಕೆ ದಿಟ್ಟಿದೋಸಂ ತಟ್ಟದಂತೆ ನಿವಾಳಿಸಿ ಕಳೆದು
ಮೆಂದು ಕಡೆಗಣಿಸಿರ್ಪಂ. ಈ ಜಗಮನಿತುಮನಿವಳ್ ಪೊೞ್ತುಗಳೆವ ಬಿನದ
ದಾಟದ ಪುರುಳೆನಿಸಿಯುಂ, ಪರಮಪದಮನಿವಳ ನೆಲೆವಾೞ್ತೆಯರಮನೆ
ಯೆನಿಸಿಯುಂ, ನಿತ್ಯಮುಕ್ತರನಿಬರನಿವಳೋಲಗದವರೆನಿಸಿಯುಂ, ತನ್ನು
ಳ್ಳೊಡಮೆಯನಿವಳೊಡಮೆಯೆನಿಸಿಯುಂ, ತಣಿಯದೆ ತಾನುಮಿವಳ
ಬೞಿಸಂದಿರ್ಕುಂ. ಸಾಸಿರ್ಮೊಗಕ್ಕೈಕಾಲ್ವೆತ್ತು ವಿಶ್ವರೂಪಮಂ ಪೊತ್ತುಂ
ಇವಳ ಲೀಲೆಗಳಂ ಕಡೆಗಾಣಲಾಱದೆ ಪೊಸಪೊಸತನನುಭವಿಸುತ್ತಾ
ನಂದಮಯನೆನಿಸಿರ್ಕುಂ. ಮುಂ ಸೀತಾವತಾರದೊಳ್ ಸಿರಿಗೈಕಾಲ್ಮೊಗ
ದಾವರೆಗಳುಂ ಕಣ್ನೆಯ್ದಿಲೆಗಳುಂ ನಾಸಾಚಂಪಕಮುಂ ಬಾಯ್ದುಱಿ
ಬಂದುಗೆಯುಂ ಪಲ್ಮೊಲ್ಲೆಗಳುಮೆಂಬ ಪಲವುಂ ತೆಱದ ಕಮ್ಮಲರ್ಗಳಂ
ತಳೆದೆಸೆವ ಪೊಸವಗೆಯ ಪೊಂಜಳೆಯಂತೆ ರಂಜಿಪ ಮೆಯ್ಯ ಸಿರಿಯೊಳಂ
ಒಳ್ಗುಣಂಗಳೊಳ್ಗನೊಳಂ ಮುಗ್ಧನೆನಿಸಿ ಅವಳ್ಬೆಸಸಿದೊಡನೊಡಂಬಟ್ಟು
ಸರ್ವಜ್ಞತೆಯನುೞಿದು ಮೇಗಣ್ಗೆ ಬರ್ಪುದನಱಿಯದೆ ಕದುಬು
ಗೊಂಡು ಬಿಲ್ಲಂಬುಗೊಂಡು ಪೊಮ್ಮೃಗಮಂ ಬೞಿಸಂದಂ. ಇಂತು ಕಾಂತ
ನಂ ತನ್ನ ಗುಣಂಗಳಿಂ ಬಸಂಗೆಯ್ದಿರ್ಪ ಇವಳಡಿದಾವರೆಯ ಪೊರ್ದುಗೆ
ಯೊಂದುಂಟೆಂಬ ಬಲ್ಪಿಂದೈಸೆ ಆಮೆಮ್ಮ ಪಿಂತಣ ಕರ್ಮಕ್ಕಂಜದೆ ದಿಟ
ವಿಡಿದಿರ್ಪುದು !—ಎಂದು ಪಲವುಂ ಪೈಮೆಗಳಂ ಭಾವಿಸುತ್ತೆ ಮತ್ತಮರೆ
ಮುಗಿದ ಕಣ್ಮಲರ್ಗಳುಂ, ಸುರಿವ ಸೊಗದಾಲಿನೀರುಂ, ಸೆರೆಬಿಗಿದ

ಕೊರಲೊಳ್ಸಿಲ್ಕಿದ ತಡವಡುವ ಅಸಿದನಿಯುಂ, ಕಡಬಂ ಪೂಶಂತೆ ಮೆಯ್ಯೊಳ್ಪೊಣ್ಮಿದ ನವಿರುಮಾಗಿ ನುತಿಗೆಯ್ದನದೆಂತೆನೆ :—

—ಸ್ತುತಿ—

ಜಗನ್ಮಾತೆ ! ನೀಂ ಪಾಲ್ಗಡಲೊಳ್ಪುಟ್ಟಿ ತಾವರೆಯೊಳ್ದಟ್ಟಡಿಯಿಟ್ಟು ಬಿಡುಗಣ್ಣರ ಮುಡಿದಂಡೆಗಳೊಳ್ನಡೆಗಲ್ತು ನಾರಾಯಣನೆರ್ದೆಯ ಎಳದೊಳಚಿಸರಂಗಳೊಳುಯ್ಯಲಾಡುತ್ತಿರ್ಪ ನಿನ್ನ ಮೆಲ್ಪನಾರ್ಬಣ್ಣಿಸುವರ್ ? ನೀಂ ಪುಟ್ಟಿದುದಱಿಂ ಪಾಲ್ಗಡಲೊಳ್ಪೆಂಪುಂ, ನೆಲಸಿದುದಱಿಂ ತಾವರೆಯೊಳ್ಕಂಪುಂ, ಸೋದರಮಾದುದಱಿಂದಮರ್ದಿನೊಳಿಂಪುಂ, ಚಂದಿರನೊಳ್ತಣ್ಪುಂ ಸಮನಿಸಿರ್ಕುಂ. ಜಗನ್ಮಂಗಲಮೆನಿಪ ಶಾಙ್ಗ್ರಯುಗಮುಂ ನಿನ್ನ ಸಂಗತಿಯಿಂ ಮಂಗಲಮೆನಿಪುದು. ಅಲರ್ಗಂಪುಗಳುಂ ರನ್ನಗದಿರ್ಗಳುಂ ಪುದುಗಿದಂತೆ ಪುದುಗಿರ್ಪುದಱಿಂ ನೀನುಮಿನಿಯನುಮೊಂದೆ ಪುರುಳೆಂಬರ್. ಮಱುಕಮುಳ್ಳೊಡಂ ಮುಂತಣ ಹಿತಮನೆಳಸಿ ಮಕ್ಕಳಂ ಶಿಕ್ಷಿಪುದು ತಂದೆಗೆ ಸಾಜಮಾದುದಱಿಂದೆತ್ತಾನುಮೊರ್ಮೆ ಕನಲ್ವಿನಿಯನ ಕನಲ್ಕೆಬಿಸುಪಂ ತಣ್ಪಿಸಿ ಎಮ್ಮಂ ಕಾಪಿಡವೇಟ್ಪುದು. ಮುಂ ಲಂಕೆಯೊಳ್ಸಿಂಗರದೋಂಟದೊಳ್ನಿಮ್ಮಡಿಗಳಂ ಜರೆದು ನುಡಿದದ್ದರಿಸಿ ಬೆದಱಿಸಿ ಕಾಡಿ ಕೈದುಮಂ ನೆಗಪಿ ಕಕ್ಕಸಂಗೊಂಡ ರಕ್ಕಸನ ಪೆಂಡಿರಂ ಕಡಿಕಂಡಂಗೆಯ್ವೆನೆಂಬ ರಾಮದೂತನ ಬಿಗಿದ ಮುಷ್ಟಿಯುಂ ಬಿರ್ಚಿಸಿದ ನಿನಗೆ ನೀಂ ಬೆಸಸಿದುದಂ ಹಸಾದಮೆಂದೆಸಗುವ ಮುಕುಂದನಂ ತಣ್ಪುಗೊಳಿಪುದರಿದಲ್ತೈಸೆ ! ಕಡುನೇಹದಿಂ ತೊರೆದ ಬಗೆಮೊಲೆಯು ಮಱುಕವಾಲಂ ಕೊರಲ್ವರೆಗಂ ತುಂಬುವನ್ನಮೀಂಟಿ ಸವಿಯೆಸೊರ್ಕೇಱ ಸೊದೆಯುನುಪ್ಪೆಸರ್ಗೆತ್ತು ಸೊದೆಯುಣಿಗಳಂ ಗಣಿಸದಿರ್ಪೆಂ. ಪರಿವ ಪಾವು ಉರಿವ ಕಿರ್ಚು ಮೊದಲಾದುವನಱಿಯದೆಳಸುವೆಳಸಿಸುವಂ ತಡೆದು ಕಾಪಿಡುವಂತೆ ದುರ್ವಿಷಯಕ್ಕೆಱಗದಂತೆವೊಲೆಮ್ಮಂ ಪದುಳಂಗೊಳಿಪುದೆ ಲೇಸು. ಅಂತಲ್ಲದೊಡೆ ಮುಂತಣ್ಗೆ ಜಗದೀಶಂ

ಎನ್ನಾಣತಿಯಂ ಮೀಱಿದನೆಂದು ಕಡುಗನಲಿ ಕೈದುವಿಡಿದು ಖತಿಗೊಳ್ವಿನಮಾನುಮೆನ್ನ ಕೀೞ್ಗೆಯ್ಮೆಗಳಂ ನೆನೆದು ನಡನಡುಗಿ ಕಾತರಿಸಿ ಕಣ್ಗೆಡುವಿನಮೆಮ್ಮಿರ್ವರುಮಂ ನಿಟ್ಟಿಸಿ ದೆಸೆಗೆಟ್ಟು ಅವನನೊಡಂಬಡಿಪುದರ್ಕೆ ನೀನಾವ ಬಗೆಯ ಸೊಗಸುನೋಟಂಗಳನಾವ ತೆಱದ ಮೆಲ್ನುಡಿಗಳನಾವ ಪಾಂಗಿನ ಶೃಂಗಾರಲೀಲೆಗಳನೆಸಗುವೆಯೋ ಏಂ ಕೋಟಲೆಗೊಳ್ವೆಯೋ! ಅಱಿತಱಿತಡಿಗಡಿಗಾನೆಸಗಿದ ದುಷ್ಕೃತಂಗಳನೆಣಿಸಿ ಕಾದೆಣ್ಣೆಸೋಂಕಿನೊಳ್ತಣ್ಣೀರ್ ಪರಿವಂತೆ ತಣ್ಣಗೆ ಬಿಸುಪೇಱಿ ಮುಪ್ಪುರಿಗೊಂಡ ಪುರ್ಬುಮಗಿವ ಬಾಯ್ದೆಱೆಯುಂ ಕಡಿವ ಪಲ್ಗಳುಂ ಕೆಂಪಡರ್ದ ಕಡೆಗಣ್ಣುಂ ಕಿಡಿಸೂಸುವ ನಟ್ಟಾಲಿಯುಂ ಕೆತ್ತುವ ಮೀಸೆಯುಮುಬ್ಬಸಂಗೊಳ್ವ ಸುಯ್ಯೆಲರುಂ ನಸುನಡುಗುವ ಕೈಕಾಲ್ಗಳುಮಾಗಿ ನೆಗಪಿದ ಪೊಂಬೆತ್ತದಿಂ ಪೂಣ್ದು ನಡೆವೆಡೆಯೊಳ್ ಬಿಱುಗಾಳಿಯೊಳ್ತೆರೆಮಸಗೆ ಮಿತಿಮೀಱಿಯುರ್ಕಿಯುರ್ಕಿ ಕವಿದು ಬರ್ಪ ಕಡಲ ಕಡುಪಂ ತಡೆವ ವೇಲೆಯಂತೆ ನೀನುಮವನೊಳ್ಪಡಿಬರಿಸಿ ಅಸ್ತ್ರಪ್ರತ್ಯಸ್ತ್ರನ್ಯಾಯದಿಂ ಭಯಪ್ರಣಯಂಗಳೊಂದುವೆರಸಿ ನಸುಮಣಿದ ಮೊಗಮುಂ ಬೆರ್ಚುವ ಮನಮುಂ ಬೆದಱುನೋಟಮುಮಾಗಿ ನಿಂದವನ ಕೋಪಮಿನಿಸಿನಿಸಂ ತಣ್ಪುಗೊಂಡಿೞಿತರ್ಪುದಂ ಕಂಡು “ಏನಿದೀಯಱಿಯದ ಮಕ್ಕಳೊಳೀ ಪರಿಯ ಕೋಪಾಟೋಪಮುಚಿತಮಲ್ತು ಸಾಲ್ಗುಂ, ಇಂದು ಮೊದಲೆಂದೆಂದುಮಿವರ್ತಪ್ಪುಗಳನೆಸಗರ್, ಪಿಂತಣ ತಪ್ಪಂ ಮಱೆತು ಸಲಪುವುದೆಂದು” ನಲ್ಮಾತುಗಳಂ ನುಡಿಯುತ್ತೆ ಮೆಲ್ಲಮೆಲ್ಲನೆ ಪತ್ತೆಸಾರ್ದವನ ನೆಗಪಿದ ಕೆಯ್ಯನೊರ್ಕೆಯ್ಯೊಳಾರಯ್ಯುತ್ತೆ ಪೆಱತೊರ್ಕೆಯ್ಯಿಂದೆನ್ನಂ ಪಿಡಿದೆೞೆದವನಡಿದಾವರೆಯೊಳ್ ಕೆಡಪಿ ಪುರ್ಬುಗಂಟಂ ಬಿರ್ಚಿಸಿ ದಿಟ್ಟಿಯಂ ತಣ್ಪುಗೊಳಿಸಿ ನಗೆಯಂ ಮೊಳೆಯಿಸಿ ಬಗೆವನೆಯೊಳಗೋಣೆಯೊಳ್ ಮಲಗಿದ ದಯೆಯನೆಚ್ಚಱಿಸಿ ಕೃತಾರ್ಥೆಯಪ್ಪೆ. ನೀನೊಡತಿಯುಂ ತಾಯುಂ ದಯಾಳುವುಮಾದುದಱಿಂದೆಮ್ಮವರೆನ್ನಂ ನಿನ್ನ ಕೆಯ್ಯೆಡೆಗೆ

ಯ್ದುರ್. ಎನ್ನ ಗುಣದೋಷಂಗಳನೆಣಿಸದೆ ಸಲಪುವೇಳ್ಪುದೆಂದು ಸಾಷ್ಟಾಂಗವೆಱಗಿ ತೀರ್ಥಪ್ರಸಾದಂಗೊಂಡು ಮುಂತಣ್ಗೆ ನಡೆದು—

೫—ಗಜೇಂದ್ರವರದರು—

ಅಲ್ಲಿ ಪೊಂಬೆಟ್ಟುಗೊಂಡೇಱಿ ಅಮರ್ದುಂಡ ಕಾರ್ಮುಗಿಲಂ ಪೋಲ್ವ ಗರುಡಾರೂಢನಪ್ಪ **ಗಜೇಂದ್ರವರದ**ನಂ ವಂದಿಸಿ ಕೆಳಗಿದುಂ ನೆಲನಂ ಕಟಿಇದು—

೬—ಶ್ರೀರಾಮಾನುಜಾಚಾರ್ಯರ ವರ್ಣನೆ—

ಅಲ್ಲಿ ಮನುಜಾವತಾರಕ್ಕಮನುಗುಣಮಾಗಿ ಸಾಸಿರ್ವೆಡೆಯುಂ ಮಱಸುವೆಡೆಯೊಳ್ ಮಱಿದುಟಿಸಿದ ಮಾಶೇಷನ ಕೆಲವುಂ ಬೆಳ್ವಿಡೆಗಳಂತೆಯುಂ, ಒಳಗಿಟ್ಟಣಿಸಿದ ಸತ್ವಶುದ್ಧಿ ಪೊಱಸೂಸಿದಂತೆಯುಮೆಸೆವ ವಿಮಲೋರ್ಧ್ವಪುಂಡ್ರಂಗಳುಂ। ಶ್ರೀಮನ್ನಾರಾಯಣಂಗೆ ಭಕ್ತರೊಳ್ಪುಟ್ಟಿದನುರಾಗಮೀಭಕ್ತೋತ್ತಮರೊಳ್ ಸಾಕಾರಮಾಗಿ ಮೆಯ್ಯಂ ಪತ್ತಿದಂತಿರ್ಪ ಸಿರಿಗಾವಿಯುಡೆಯುಂ। ಸತ್ವಗುಣಂ ಮುಪ್ಪುರಿಗೊಂಡಂತೆ ತೋರ್ಪ ಯಜ್ಞೋಪವೀತಮುಂ। ಭಗವದ್ವಿಷಯಮನುಟಿದು ಕೆಲಕ್ಕೆ ತೊಲಗದಂತೆ ತನ್ನ ಶಿಷ್ಯರ ಕರಣತ್ರಯಮುಂ ನಿಗ್ರಹಿಪುದರ್ಕಂ, ಮತ್ತಮೊಂದಱೊಳೊಂದುವರೆದಿರ್ಪ ಮೂಱುಂ ಗುಣಂಗಳಂ ದಂಡಿಪುದರ್ಕಂ, ಮೋಕ್ಷವಿರೋಧಿಯಪ್ಪ ತ್ರಿವರ್ಗಮುಂ ತಱುಬುವುದರ್ಕಂ ಕೊಂಡಂತೆಸೆವ ತ್ರಿದಂಡಮುಮಾಗಿ—ಮೆಯ್ವೆತ್ತ ವಿಷ್ಣುಶಕ್ತಿಯಂತೆಯುಂ, ಪ್ರಾಣಂಬೆತ್ತ ಸೇನೇಶನಾಣತಿಯಂತೆಯುಂ, ವ್ಯಕ್ತಿವಡೆದ ಶಠಾರಿಯ ಭಕ್ತಿಯಂತೆಯುಂ, ಸನ್ನದಮಾದ ನಾಥಮುನಿಯ ಬಿನ್ನಣದಂತೆಯುಂ, ಸಾಕಾರಮಾದ ಯಾಮುನಾರ್ಯರೆಣಿಕೆಯಂತೆಯುಂ, ಮತ್ತಂ ಶಮೆಯ ಸೀಮೆಯಂತೆಯುಂ, ದಮೆಯ ಭೂಮಿಯಂತೆಯುಂ, ದಯದ ಕಣದಂತೆಯುಂ, ವೈರಾಗ್ಯದೀಕ್ಷೆಯಂತೆಯುಂ, ಶ್ರೀವೈಷ್ಣವರ ಭಾಗ್ಯದಂತೆಯುಂ ತೋರ್ಪ **ಶ್ರೀರಾಮಾನುಜ**ರಡಿಗೆಱಗಿ ನೇಸಱ ತೇಜದೊಳ್ಬಸಿಯದ ತಣ್ಪಂ ಬೆರಸಿದಂತಿ

ಮೆಯ್ಯೊಗರುಂ, ಪಲವುಂ ಬಿಜ್ಜೆಗಳ ಪಡಿನೆಟಿಲಂ ತನ್ನೊಳೊಳಕೊಂಡ ರನ್ನಗನ್ನಡಿಯಂತಿರ್ಪ ಮೊಗಸಿರಿಯುಂ, ತೆರೆನೊರೆಯನುಟ್ಟಿದಿರ್ಪಮುರ್ದು ಗಡಲ ಮಡುವಂ ಪಡಿಗೊಳ್ವ ಗಾಂಭೀರ್ಯಮುಂ, ಕರೆಗಣ್ಮಿ ಕವಿವ ಕರುಣಾ ಮೃತಾಬ್ಧಿ ಕಲ್ಲೋಲಂಗಳಂ ಪೋಲ್ವ ಕುಳಿನೋಟಮುಂ, ಬೆಳ್ವಲ್ವೆಳಗಿನ ಬಿತ್ತರದಂತೆಸೆವ ನಸುನಗೆಯುಂ, ಶ್ರೀನಾರಾಯಣನ ಸೇವಾಸಮಯದೊಳ್ ಕೊರಲ್ಗೆ ಧರಿಸಿದ ಸಂಪಗೆಯ ದಂಡಿಗೆಯಂ ಪೋಲ್ವ ಸಿರಿದೋಳ್ಗಳುಂ, ಅವಱ ಕೊನೆಯೊಳ್ಬಿಗಿದ ಎರಡುಂ ತಾವರೆಗಳನೆಣೆಗೂಡಿಸಿದಂತೆ ಮುಗಿದ ಕೆಯ್ಗಳುಂ, ಪಟನುಡಿವೆಂಡಿರ ಕುರುಳ ಸಿಕ್ಕುವಿಡಿಸಲ್ಕೊಂಡ ಸಿಕ್ಕಟಿಗೆಯಂ ಪೋಲ್ವ ಮುಕ್ಕೋಲುಂ, ಎಳವಿಸಿಲ ಸೋಂಕಿನೊಳೆಸೆವ ಕೆಂದಾವರೆಗಳಂತೆಳಗಾವಿಯುಡೆವಡೆದ ಸಿರಿಯುಡಿಯುಮಾಗಿ ಪದ್ಮಾಸನದೊಳಿರ್ಪಂದಮಂ ತನ್ನ ಮನದೊಳ್ ಬಂದಿವಿಡಿದೆಣಿಸಿದಂ :—

ಮುಂ ಮಹಾಶೇಷಂ ಪರಮಪದದೊಳ್ ವೈಕುಂಠನಾಥನ ಸೇವಾಸಾಮ್ರಾಜ್ಯದೊಳ್ತಣಿದಿರ್ದುಂ ಭಗವತ್ಸಂಕಲ್ಪಾನುಗುಣಮಾಗಿ ಕಲಿದೋಷದೂಷಿತರಪ್ಪ ಜನರ ಕಾಲುಷ್ಯಮಂ ಕಳೆದು ಭಗವಚ್ಛೇಷತ್ವಮನೆಟ್ಟಿಱಿಸಿ ಸಲಪುವದರ್ಕವತರಿಸಿದಂ । ಶ್ರೀರಂಗನಾಥಂಗೆ ನಿತ್ಯ ಪಕ್ಷ ಮಾಸ ಸಂವತ್ಸರೋತ್ಸವಂಗಳಂ ಸಾಂಗಮಾಗಿ ನಡೆಸಿದಂ । ಶ್ರೀಕಾಂಚೀಪೂರ್ಣರ ಮುಖದೊಳ್ಕಾಂಚೀನಾಥನತ್ತಣಿಂ ತತ್ವಹಿತಪುರುಷಾರ್ಥಂಗಳ ನೆಲೆಯಂ ತಿಳಿದಂ । ಶ್ರೀವೆಂಕಟೇಶಂಗೆ ಶಂಖಚಕ್ರಲಾಂಛನಂಗಳಂ ಸಮರ್ಪಿಸಿದಂ । ಸಿದ್ಧಾಶ್ರಮದೊಳ್ ಪೂರ್ಣನಡಿಗೆ ಮೂಲಮಂತ್ರಾರ್ಥಮಂ ಬಿನ್ನವಿಸಿದಂ । ಶ್ರೀಧನ್ವಿನೂತನಪುರದೊಳ್ ಶ್ರೀ**ಗೋದಾದೇ**ವಿಯಗ್ರೊಡವುಟ್ಟಿದನೆನಿಸಿದಂ । ಅಂತಲ್ಲದೆ ಎಮ್ಮಾಯಾದನಾಚಲದೊಳ್ಕುಲದೇವತೆಯೆನಿಪ ನಾರಾಯಣಂಗೆ ಪಡಿನೆಟಿಲೆನಿಸಿ ಉಕ್ಕೆವಡೊಳ್ ಸಲ್ವ **ಚೆಲ್ವರಾಯುಂ** ಡಿಳ್ಳೀಶ್ವರತನುಜೆ **ವರನಂದಿ**ಗೊಲ್ದು ಮೆಯ್ಮಱೆದಿರೆ ಹಿತೋಪದೇಶಂಗೆಯ್ದು ಕರೆದು ತಂದು ತಂದೆಯೆನಿಸಿದಂ । ಅದಱಿಂದೀಯತೀಂದ್ರ

ರೆಮ್ಮ ಯಾದವರ್ಗೆ ಕುಲಗುರುವೆನಿಸಿದರೆಂದು ಸಂಬಂಧಮನನುವದಿಸಿ ಮತ್ತಂ ನುತಿಗೆಯ್ವನದೆಂತೆನೆ :—

ಪರತತ್ವಮಂ ನಿರ್ಣಯಂಗೆಯ್ವುದರ್ಕೆ ಕೆಲವುಮನುವಾಕಂಗಳೊಳನಾದೊಡಂ ಪುರುಷಸೂಕ್ತಮೊಂದೆ ಪ್ರಧಾನಂ ಮಿಕ್ಕೆಲ್ಲಮುಮಿದರ್ಕನುಗುಣಮಾಗಿರ್ಕುಮೆಂಬ ನೆಲೆಯಂ, ಒರ್ವಳುಟೀಯದೆ ಮೂವತ್ತೆರಡುಮುಪನಿಷದ್ವಧುಗಳೊರ್ಕೊರಲಾಗಿ ಪುರುಷೋತ್ತಮನ ಪಾಣಿಗ್ರಹಣಂಗೆಯ್ದು ಪತಿವ್ರತೆಯರಾಗಿರ್ಪಿನಂ ದೇವತಾಂತರ ಸಂಬಂಧದಿಂದಿವರನಟೀಸಲ್ಕೆ ಪೂಣ್ದು ಬಲಾತ್ಕರಿಸುವ ಶೈವ ಪಾಶುಪತಾದಿ ದುರ್ವಾದಿಗಳಂ ನ್ಯಾಯಮಾರ್ಗದೊಳೆ ಖಂಡಿಸಿ ತಱುಬಿ ಆ ಹದಿಬದೆಯರನಾವಗಂ ಕಾಪಿಡಲ್ಕೆ ಶ್ರೀಭಾಷ್ಯ ವೇದಾಂತದೀಪ ವೇದಾಂತಸಾರ ಗೀತಾಭಾಷ್ಯಾದಿ ಗ್ರಂಥಂಗಳಂ ನಿಯಮಿಸಿ ಪದುಳಂಗೊಳಿಸಿದೈ ಗಡ ! ನಿನ್ನ ಭಗವದ್ವಿಷಯಾಭಿಯೋಗಮೆಂತುಟೋ ! ಮತ್ತಮಾಜಗದೀಶ್ವರನ ವಿಭೂತಿಯೆನಿಪ ಪದಿನಾಲ್ಕುಂ ಲೋಕಂಗಳನವನ ರಾಜಧಾನಿಯಪ್ಪ ವೈಕುಂಠಮನವನ ರಮಣಿಯಂ ಛತ್ರಚಾಮರಾದಿಚಿಹ್ನಂಗಳುಮಂ ಮಿಕ್ಕುದೇನವನ ದಿವ್ಯಾಂಗಮುಮನಪಹರಿಸಿ ಪುಸಿಯೆಂಬ ಚಾರ್ವಾಕ ಬೌದ್ಧ ಜೈನ ಮಾಯಾವಾದಿಗಳ್ ಮುಂತಾದ ಸಾಸಿಗರಂ ಸದೆದುಳ್ದುಡಮೆಗಳೊಳೆಳ್ಳನಿತುಂ ಪೋಗದಂತೆ ಪರಿಪಾಲನಂಗೆಯ್ದೆ ಗಡ ! ನಿನ್ನ ಭಗವದ್ದ್ರವ್ಯಾಭಿಮಾನಮೆಂತುಟೋ ! ನಿಚ್ಚಲುಮೆಮ್ಮ **ಚೆಲ್ವರಾಯಂ** ತನ್ನುಳ್ಳ ಸಾಸಿರ್ವೆಸರ್ಗಳಂ ಕಿವಿಗೊಳಿಸದೆ ಯತಿರಾಜಕುಮಾರನೆಂದು ಪೊಸವೆಸರನಾಲಿಸಿ ಮೆಯ್ಯನವಿರೇಱೆ ಮೊಗಸಿರಿವಡೆಗುಂ : ಈಮಹಿಮೆಯನಾರ್ಬಣ್ಣಿಪರ್ ?—

ಎಂದೆಱಗಿ ಹೃದ್ಯಮೆನೆ ಪಾದ್ಯಮನಾಸ್ವಾದಿಸಿ ಮುಂತಣ್ಗೆ ನಡೆದು ಪೊನ್ಬಟಿಯಿಂಗೆಗಂಬಮಂ ಬಲವಂದಲ್ಲಿ ಒಳವಾಗಿಲೊಳ್ ರನ್ನವಚ್ಚಂಗಳಂ ಪೊನ್ನುಡೆಗಳಂ ಪಣಂಗಳಂ ಪಣ್ಕಾಯ್ಗಳಂ ಕಾಣ್ಕೆಗೊಂಡು ಭಕ್ತಿಭರದಿಂ ಪುಗುವ ನಾಡುಬೀಡುಗರುಂ, ಮತ್ತಂ ಸಪಿಸಪಿಯೆ ತಣಿವು

ದೋಱುವವುರ್ದಂ ಪೋಲ್ವ **ಚೆಲ್ವನಾರಾಯಣ**ರ ಮೆಯ್ಸಿರಿಯಂ ನಿಟ್ಟಿಸಿ ಮನಂಗೊಳಿಸಿ ಮೊಗದೊಳ್ಪೊಸಪೊಗರುಂ, ಕಣ್ಗಳೊಳ್ಸೊಗದಾಲಿನೀರುಂ ಕೊರಲೊಳ್ಗದ್ಗದಮುಂ ಕಂಠದೊಳ್ಪ್ರಸಾದಪೂಸರಮುಂ ಕೆಯ್ಯೊಳ್ಪಾಸಿ ರ್ಪೆಸರ ಪೂಜೆಯ ತೊಳಚಿಯುಂ ಮೆಯ್ಯೊಳ್ಪವಿರುಮಾಗಿ ಪೊಱಮಡು ಮವರುಮೋರೊರ್ವರಿದಿರ್ಚುವ ನೂಕುತಾಕಂ ಸಿರವಿಸಿ ಕಿಱಿದುಂ ಪೊಱ್ತು ನಿಂದು ಅಲ್ಲಿಯ ಸಂದಣಿ ನಸುಪರೆವುದುಂ ;

— ರಂಗಮಂಟಪದ ವರ್ಣನೆ —

ಇದಿರೊಳ್ಪವಿದು ಪಾಯ್ವ ಜಗದೀಶ್ವರನ ಕಟಾಕ್ಷಾಮೃತ ಪ್ರವಾಹಮನಿದಿರೀಸುತ್ತೆ ಪೊಂಬಾಗಿಲನೊಳಪೊಕ್ಕು ಅಲ್ಲಿ ಪಱ್ತಗೊಂ ಡಿರ್ಕೆಲದೊಳ್ದಿವ್ಯಪ್ರಬಂಧಾನುಸಂಧಾನಂಗೆಯ್ವ ಶ್ರೀವೈಷ್ಣವರ ಸಿರಿಗೊ ರಲುಲಿಯಿಂ ಶಬ್ದಮಯಮುಂ। ಮೇಲ್ಕಟ್ಟಿನ ಲಂಬಣದ ಪೂಸರಂಗಳಿಂ ಸುರಿವ ಜೇನ ಸರಿಯಿಂ ರಸಮಯಮುಂ। ಬಳಸಿದ ರನ್ನ ಗೋಡೆಗಳ್ಗೆ ಲೇಪಿ ಸಿದ ಪಚ್ಚೆಗಪ್ಪುರದ ತಣ್ಪಿನಿಂ ಗಂಧಮಯಮುಂ। ಪರಮಭಾಗವತರ ಸಿರಿಮೆಯ್ಯೊಳ್ತೊಳಪ ವಿಮಲೋರ್ಧ್ವಪುಂಡ್ರಚ್ಛಾಯೆಯಿಂ ಸತ್ವಮಯ ಮುಂ। ಮಣಿವ ಮನಗರಗುವ ಏಟ್ವ ನಿಲ್ವ ನೆಲೆಗೊಳ್ವ ಕೆಯ್ಮುಗಿವ ಕವಿವ ನಿಟ್ಟಿಸುವ ನಿರವಿಸುವ ಭಾವಿಸುವ ಬಗೆಗೊಳಿಸುವ ನಲಿವ ನವಿ ರೇಱುವ ಅಚ್ಚರಿವಡುವ ಆಲಿನೀರ್ಗಱೆವ ಸೊರ್ಕುವ ಸೊಗಂಬಡುವ ಭಕ್ತರನುಗೆಯ್ತಂಗಳಿಂ ಭಕ್ತಿಮಯಮುಂ। ಒರೊರ್ವರ್ಗೆಱಗುವ ಇನಿ ವಾತುನುಡಿವ ಒತ್ತಿಗೆಬರಿಸುವ ಒಳ್ಪುದೋಱುವ ಒಡೆಯನೂೞಿಗಂಗೆ ಯಿಸುವ ಉಚಿತೋಪಚಾರದಿಂ ಸೌಜನ್ಯಮಯಮುಂ। ಪಿಡಿದ ಸೀಗುರಿ ಬೀಸಣಿಗೆಗಳನಿತ್ತು ತಾಂ ಪೊತ್ತಿರ್ಪ ಭೃಂಗಾರಪತದ್ಗ್ರಹಂಗಳಂ ಪಲ್ಲ ಟಂಗೆಯ್ವಮಾನವರ ಸೇವಾರಸಕ್ಕೊಲ್ಮೆಗೆಯ್ವ ನಾಳ್ಮೊಗಂ ಮೊದಲಾದ ದೇವನಿವಹದ ವಿನಯದಿಂ ಸೌಶೀಲ್ಯಮಯಮುಂ। ಇಟ್ಟಣಿಸಿ ಸಾಷ್ಟಾಂಗ ವೆಱಗಿ ನೆಟ್ಟನೇೞ್ವಿನಂ ಬಜ್ಜರಮಗುಡದ ಸೂಸಕದ ಮೊಳೆಗಳೊಳ್ಸಿ

ಲ್ಕಿದ ವಿರಕ್ತರ ಸ್ವಚ್ಛತರಪಟಚ್ಚರೋತ್ತರೀಯಶಕಲಮಂ ಪೊಸರಂಗೆತ್ತು ಸುತ್ತಮಿಂದ್ರಾದಿ ದೇವತೆಗಳಿಸಕದಿಂ ವೈರಾಗ್ಯಮಯಮುಂ। ಭಗವತ್ಸೌಂದರ್ಯಾತಿಶಯದಿಂದೆಮೆಯಾಟಮುಱಿದಿರ್ಪುದೊಂದೆ ತೆಱನಾದೊಡಂ ದೇವಲೋಕದೊಳೆಂದೆಂದುಂ ಕಾಣದರ್ಚಾವತಾರಸೌಲಭ್ಯದೊಳಚ್ಚರಿವಡುವರ್ ದೇವರೆಂದು ತಿಳಿವುದಱಿಂ ವಿವೇಕಮಯಮುಂ। ತತ್ತದವಸರದೊಳ್ತಱದೆಗೆದು ತೊಳಗುವಾಲತಿಯ ಪಲವುಂ ದೀವಿಗೆಗುಡಿಗಳ್ ಪಲವುಂ ರನ್ನಗಂಬಂಗಳೊಳ್ಪಡಿನೆಟಿಲ್ಗೊಂಬುದಱಿಂ ತೇಜೋಮಯಮುಂ। ಮುಂ ಭರದ್ವಾಜಾಶ್ರಮದೊಳಂ ಶಬರಿಯೆಲೆವನೆಯೊಳಂ ನಂದಮಂದಿರದೊಳಂ ಗೊಲ್ಲವಳ್ಳಿಯ ಗುಡಿಲ್ಗಳೊಳಂ ಗೋವರ್ಧನಾಗ್ರದೊಳಂ ಯತಿಪತ್ನಿಯರೊತ್ತಿನೊಳಂ ಸವಿದ ಶಾಕಶಾಲ್ಯೋದನ ಸೂಪಾಪೂಪ ಪಾಯಸ ಪರಮಾನ್ನ ಫಲ ಮೂಲ ದಧಿ ದುಗ್ಧ ನವನೀತಂ ಮೊದಲಾದುವನಿತುಮನೊಂದೊಂದವಸರದೊಳ್ ತನ್ನ ಮಹಿಶೂರನಗರದರಸರ್ ನಿವೇದನಂಗೆಯ್ಯುದನಾರೋಗಿಸಿ ಆ ಅಮೃತಾನ್ನಮಂ ತನ್ನ ಭಕ್ತರ್ಗೆ ಸವಿದೋರ್ಪುದಱಿಂದಮೃತಾಸ್ವಾದಮಯಮುಮಾಗಿರ್ಪ **ರಂಗಮಂಟಪ**ದೊಳ್ ಸಾಷ್ಟಾಂಗ ಪ್ರಣಾಮಂಗೆಯ್ದೆಟ್ಟು ಮುಗಿದ ಕೆಯ್ಯುಂ ಮಣಿದೊಡಲುಮಾಗಿ ಭಕ್ತಿಭರದೊಳ್ ಗಬ್ಬಗರವಾಗಿಲೊಳ್ನಿಂದು,

— ತಿರುನಾರಾಯಣರ ದಿವ್ಯಾಂಗ ಸಮುದಾಯ ಶೋಭೆಯ ವರ್ಣನೆ—

ಒಂದೆ ಸಮಯದೊಳುದಿಸಿದ ಸಾಸಿರ್ನೇಸರ್ಗಳ ಕಾಂತಿಯಂ ಕರ್ಗಟ್ಟಲೆಯೆನಿಸಿ ಮೆಱೆವ ದಿವ್ಯಾದ್ಭುತಕಾಂತಿ-ಅಮರ್ದುಗಡಲೊಳ್ತೊಳೆದು ಜೊನ್ನದೊಳ್ತಣ್ಪುಗೊಳಿಸಿ ಚೆಂಬೊನ್ನ ಕರ್ಪಣೆಯ ಪೊಗರ್ಗಳಿಂ ಬಣ್ಣಿಗೆಗೊಳಿಸಿ ಸಿರಿವಚ್ಚದ ಪಚ್ಚವಣಿಗಳ ಬೆಳಗಿನೊಳ್ಬೆರಸಿ ಮತ್ತೆಮತ್ತೆ ಬಿತ್ತರಂಬಡೆಯುತ್ತೆ ಸುತ್ತಲುಂ ಪಚ್ಚೆಯ ಗೋಡೆಯಂತೆಯುಂ ಕೆಳಗಣ್ಗೆ ನೀಲದ ನೆಲಗಟ್ಟಿನಂತೆಯುಂ ಮೇಗಣ್ಗೆ ರಾಜಾವರ್ತದ ಮುಚ್ಚುಳ್ಪಲಗೆಯಂತೆಯುಂ ಇದಿಱಿಳೊಳ್ನಿಂದು ನಿಟ್ಟಿಸಿದ ದಿಟ್ಟಿಗಳ್ಗೆ ತಣ್ಗಡಿಗೆಯುಂ

ತೆಯುಂ ಮೆಯ್ಗೆ ಕತ್ತುರಿಯಣ್ಪಿನಂತೆಯುಂ ಕರ್ಬಟ್ಟೆಯೆಡೆಯಂತೆಯುಂ ಕಾರಗಿಲ್ವೊಗೆಯಂತೆಯುಂ ಕವಿಯುತ್ತಿದೆ । ಮತ್ತಂ ಬಾವನ್ನದ ಕಪ್ಪುರದ ಕುಂಕುಮದ ಕತ್ತುರಿಯ ಪಲವುಂ ಕಮ್ಮೆಲರ್ಗಳೊಳೆ ಪಾಲಸಂ ಕಳೆದು ಒಳ್ಗಂಪನೊಂದುಗೊಳಿಸಿದಂತೆಸೆವ ಸಿರಿಮೆಯ್ಯ ತನಿಗಂಪು—ಬೆಟ್ಟಿತಾದು ದಱಿಂ ಲೇಪಿಸುವಂತೆಯುಂ ತುಂಬುವಂತೆಯುಂ ಘ್ರಾಣಮಂ ತಣಿಯಿ ಸುತ್ತಿದೆ । ಎಂದಿಂತು ಕಾಂತಿಸೌಗಂಧ್ಯಂಗಳೊಳ್ಮಿಱುಂಗಿ ತೀಲ್ದ ದಿವ್ಯಾಂಗ ಸಮುದಾಯಶೋಭೆಯಂ ನಿಟ್ಟಿಸುತ್ತೆ ನಿರವಿಸಿದಂ :—

ಇಂದೀವಸ್ತುವೀತೆಱನೆಂದು ತಿಳಿವುದರ್ಕೆ ಯೋಗಿಗಳ ಬಗೆಗಂ ಪಟಿನುಡಿಗಮಡಕಮಾಗದಿರ್ಪುದಱಿಂದಪ್ರಮೇಯಮೆಂದುಂ, ಕಿಱಿದ ರ್ಕಂ ಕಿಱಿದೆಂದುಂ ಪಿರಿದರ್ಕಂ ಪಿರಿದೆಂದುಂ, ಎಲ್ಲಾಪುರುಳ್ಗಳೊಳಿರ್ಕು ಮೆಂದುಂ, ಎಲ್ಲಾ ಪುರುಳ್ಗಳನೊಳಕೊಂಡಿರ್ಕುಮೆಂದುಂ, ಜಗಮಂ ಪಡೆವ ಪೊರೆವ ಅಱಿಪುವ ಬಿನದಗೆಯ್ಮೆಯೊಳ್ ಪೊಱುಗಳೆಗುಮೆಂದುಂ ಪೇೞ್ವರ್ । ಮತ್ತಂ ಸಿರಿರಾಣಿಯಲತಗೆಗುಱುಪುಗೊಂಡಿರ್ಪುದಱಿಂ ಪರ ತತ್ವಮೆಂದುಂ, ಪರಂಜ್ಯೋತಿಯೆಂದುಂ, ಪರಮಾತ್ಮನೆಂದುಂ, ಪರಬ್ರಹ್ಮ ಮೆಂದುಂ, ಪರಮಪದವಾಸನೆಂದುಂ, ಪರವಾಸುದೇವನೆಂದುಂ, ಶ್ರೀಮ ನ್ನಾರಾಯಣನೆಂದುಂ ಪೊಗೞ್ತೆವಡೆದಿರ್ಕುಂ । ಅಕಟಕಟ ! ನಿಟ್ಟಿಸಲುಂ ಮುಟ್ಟಲುಮಾಘ್ರಾಣಿಸಲುಂ ಸವಿಯಲುಂ ಕೇಳಲುಂ ಪೇೞಲುಂ ತಿಳಿ ಯಲುಂ ಜಾನಿಸಲುಂ ಕುಱುಪುಗೊಳಲುಂ ಸಾಕ್ಷಾತ್ಕರಿಸಲುಮಾಳ್ಗೆಯ್ಯ ಲುಂ ಅತ್ಯಂತದುರ್ಲಭಮಾದ ವಸ್ತು—ಎಮ್ಮ ಭಾಗ್ಯೋದಯದಿಂ ಮುಂ ಬ್ರಹ್ಮಲೋಕದೊಳ್ಪಲವುಂ ಕಾಲಮಿರ್ದು ಸನತ್ಕುಮಾರಂಗೊಲ್ದು ಅವ ನೊಡನುತ್ತರಬದರಿಕಾಶ್ರಮಮಂ ಸಾರ್ದು ಅಲ್ಲಿ ನರಸಖನಪ್ಪ ನಾರಾ ಯಣಮುನಿಯಿಂ ಪೂಜೆಗೊಂಡು ತಣಿದು ಅತ್ತಣಿಂ ಕಲಿದೋಷಂ ಸೋಂ ಕದ ತಾಣಮಂ ಕೂರ್ತ್ತೆತರ್ಪ ಮುನಿಗಳ್ಗೆ ಮೊದಲಿಗರಪ್ಪ ಸನತ್ಕುಮಾರ ರೊಡನೆ ಯಾದವಾಚಲಕ್ಕೆ ಬಂದು ಪರಬ್ರಹ್ಮಗರ್ಭಮಾಗಿ ವೇದಾಂತ

ದಂತೆ ದುರ್ವಿಭಾವ್ಯಮಾದೊಡಮಲ್ಲಿ ರಾಮಾನುಜಾರ್ಯರಿಂ ಪರಿಚರ್ಯೆ ವಡೆದು ಸರ್ವಾತ್ಮಸೇವ್ಯಮೆನಿಸಿದ **ಆನಂದಮಯ** ವಿಮಾನದೊಳ್ ಸುಲಭ ಮಾಗಿಯುಂ ಸುವ್ಯಕ್ತಮಾಗಿಯುಂ ತೋಱುತಿದೆ। ಮತ್ತಮೀವಸ್ತುವಂ ಭಾವಿಸೆ ಎರ್ದೆಯೊಳಿರ್ಪ ಸಿರಿರಾಣಿಯ ಮೆಯ್ಯೊಗರ್ಪೊಣ್ಮಿದಂತೆಸೆವ ಪಳದಿಯುಡೆಯು ಪೊನ್ನೊಳ್ಪುದುಗಿಸಿ ಪಚ್ಚೆವಣಿಯೊಳ್ಸವೆದ ಪಟಿನುಡಿ ವೆಂಡಿರ ತೊಂಡಿಲ್ವಚ್ಚದಂತೆಯುಂ, ಪೊಡವಿನೀಳೆಯರ ಸಿರಿಮೆಯ್ಯ ಕತ್ತು ರಿಯಣ್ಪಿನಿಂ ಪೊಗರ್ವಡೆದ ಯಾದವಾದ್ರಿಯ ಮುಡಿಯ ಕನ್ನೆಯ್ದಿಲ ಬಾಸಿಗದಂತೆಯುಂ, ಕೆಂಬರಲ್ಪಳಿರ್ಗಳಿಂ ದಿವ್ಯಾಯುಧಂಗಳೆಂಬ ಪೂದೊಂ ಬೆಗಳಂ ತಳೆದು ಕೆಳಗಣ್ಗಂ ಮೇಗಣ್ಗಮಿದಿರ್ಗಂ ಪಾಯ್ದುಸೆವ ನಿಡುದೋ ಳ್ಕೊಂಬುಗಳಿಂ ಪೊದಟ್ಡಿ ಪಾರಿಜಾತದಂತೆಯುಂ, ಸಿರಿಯಡಿಕ್ಕೈಕಣ್ಮೊಗದಾ ವರೆಗಳಿಂದೆಯುಂ ಸಿರಿಪೊಡವಿಯಂಚೆಗಳಿಂದೆಯುಂ ಚೆಲ್ವುವಡೆದಮೃತ ತಟಾಕದಂತೆಯುಂ, ರಸವಚ್ಚಂಗಳ ಬಣ್ಣಿಗೆವೆಳಗಿನಿಂದೆ ಇಂದ್ರಧನುವಂ ಸಿರಿರಾಣಿಯ ಪೊಂಜೆಳೆಮೆಯ್ಯಿಂ ಮಿಂಚುವಳ್ಳಿಯನೊಳಕೊಂಡೆಸೆವಮ ರ್ದಂಡ ಕಮುಗಿಲಂತೆಯುಂ ತೋರ್ಕುಂ। ಮತ್ತಮೀವಸ್ತುವಂ ನಿಟ್ಟಿಪಿ ನಂ ಎನ್ನಂ ಎನ್ನ ಪೊನ್ನಂ ಎನ್ನೊಡಮೆಯುಂ ಎನ್ನೈಸಿರಿಯುಂ ಎನ್ನರಮನೆ ಯುಂ ಎನ್ನಾಳ್ದನಂ ಎನ್ನ ತಾಯುಂ ಎನ್ನ ತಂದೆಯುಂ ಎನ್ನ ಪುಣ್ಯೋದ ಯಮುಂ ಎನ್ನ ಭಾಗ್ಯದ ಫಲಮುಂ ಎನ್ನಿಷ್ಟಾರ್ಥಮುಂ ಎನ್ನೊಡಲಂ ಎನ್ನ ಹರಣಮುಂ ಎನ್ನಾತ್ಮಮುಂ ಎನ್ನ ದೇಶಿಕನಂ ಎನ್ನ ಕುಲದೇವತೆಯುಂ ಕಂಡಂತೆ ಎನ್ನ ಮನದೊಳಾನಂದದ ಪೊನಲ್ ಪೊಣ್ಮಿಯಿರ್ತಡಿಯುಂ ಮೀಱಿ ಪಾಯ್ವನ್ನಂ ತೇಲಿಸುತ್ತುಂ ತೆರೆಗಳಿಂದುಯ್ಯಲಾಡಿಸುತ್ತುಂ ಪರ ವಶಂಗೊಳಿಸುತ್ತಿದೆ। ಮತ್ತಂ ಮತ್ತಂ ಭಾವಿಸೆ ಪುರುಳ್ಗೆ ಪುರುಳುಂ, ಆಭರ ಣಕ್ಕೆ ಆಭರಣಮುಂ, ಹರಣಕ್ಕೆ ಹರಣಮುಂ ಚೈತನ್ಯಕ್ಕೆ ಚೈತನ್ಯಮುಂ, ಆತ್ಮಂಗಾತ್ಮನುಮಾಗಿರ್ಕುಂ। ಮತ್ತಮೊಂದೊಂದವಯವದ ಸೌಂದರ್ಯ ಮಂ ನಿರವಿಸುವಿನಂ ಸಾಸುವೆಯುಂ ಕೊರೆದು ಕಡಲಂ ತುಂಬಲಡಂಗದೆ

ಪೊಱಮಡುವಂತೆ ಬಗೆಗಳವಡದೆ ಪೊಱಸೂಸುವ ಆನಂದರಸಪ್ರವಾಹ ಮೆಸೆ ನುತಿಗೆಯ್ವನದೆಂತೆನೆ :—

— ಸ್ತುತಿ —

ಈ ಸಿರಿಯಡಿಯೈಸೆ ಮುಂ ಜಗಮನಳೆವಾಗಳ್ ಬೊಮ್ಮಂ ಮೊದಲಾಗಿ ಪುಟುಗಳ್ವರೆಗಂ ಪಿರಿದು ಕಿಱಿದೆಂದೆಣಿಸದೆ ಅನಿಬರ ಸಿರದೊಳ ಮಲರ್ದಾವರೆಯಂತೆಸೆದುದು ! ಇದಱಂಗುಟದುಗುರ್ಗೊನೆಯಿಂ ಪರಿದ ಅಜಾಂಡದ ಪೊಱವಳಯದ ಪೊಸನೀರೊಳ್ಬೆರಸಿ ನಾಲ್ಮೊಗಂ ತನ್ನ ಕೈಗಿಂಡಿಯ ನೀರೊಳ್ಕೂಳಿಯಲಾತೀರ್ಥದಿಂದೈಸೆ ಶಿವಂ ಶಿವನೆನಿಸಿದಂ ; ಮೂಜಗಮುಂ ಪಾವನಮೆನಿಸಿದುದು ! ಇದನ್ನೈಸೆ ಸುರರ್ ಮುಡಿಯೊಳಂ ಯೋಗಿಗಳ್ಬಗೆದಾವರೆಯೊಳಮಾಂತು ಸಂತಸಂಗೊಂಬರ್ ! ಇದಱ ಸೋಂಕಿನಿಂದೈಸೆ ಕಲ್ಲುಱೆ ಕಣ್ದೆಱೆದುದು ; ಸೀದ ಕಂಡಂ ಸಿಸುವಾದುದು ! ಇದೈಸೆ ಕರ್ಮಜ್ಞಾನಕಭಕ್ತಿಗಳಂ ಕಡೆಗಣಿಸಿ ತನ್ನಂ ನೆರೆ ನಂಬಿದರ್ಗೆ ಸಾಕ್ಷಾನ್ಮೋಕ್ಷೋಪಾಯಮಾದುದು ! ಇದೈಸೆ ಸನಕಾದಿಗಳೆರ್ದೆಯೊಳ್ಚಂಚಲಮಾಗಿಯುಮೆನ್ನಿದಿರೊಳೀಪದ್ಮಪೀಠದೊಳ್ ಪದುಳಂಗೊಂಡಿರ್ಪುದಱಿಂ ತನ್ನ ಸೌಲಭ್ಯಮನುದ್ಘಾಪಿಸಿದುದು ! ಈ ಜಂಘೆಗಳೈಸೆ ಶ್ರೀಭೂಮಿಕರಕಮಲಲಾಲಿತಂಗಳಾಗಿಯುಂ ಕುರುಪುರಿಗೆ ದೂದುನಡೆದು ತನ್ನ ಭಕ್ತವಶ್ಯತೆಯಂ ಮೆಱೆದುವು ! ಈ ದುಂಡುದೊಡೆಗಳೈಸೆ ನೀಳೆಗೆ ಲೀಲೋಪಧಾನಮಾಗಿಯುಂ ಮಧುಕೈಟಭರೆಂಬ ಕೀಟಂಗಳಂ ತೊತ್ತುಳಿಂದುಳಿದು ತನ್ನ ದುಷ್ಟನಿಗ್ರಹಮಂ ಪ್ರಕಟಿಸಿದುವು ! ಈಬಲಮುರಿವೊಕ್ಕುಳಿಜ್ಜೊಳನ್ನೈಸೆ ತನ್ನೊಳ್ಬೆಳೆದ ತಾವರೆಯಿಂ ನಾಲ್ಮೊಗನಂ ನಿರ್ಮಿಸಿ ಜಗತ್ಕಾರಣತ್ವಮಂ ನೆಲೆಗೆಯ್ದುದು ! ಈತೆಳ್ವಸಿಱೈಸೆ ಪದಿನಾಲ್ಕುಂ ಲೋಕಂಗಳನೊಳಕೊಂಡುಂ ತುಂಬದೆ ಗೊಲ್ಲವಳ್ಳಿಯ ಗುಡಿಲ್ಗಳೊಳ್ ಕಳವುಗೊಂಡ ಪಾಲ್ಮೊಸರ್ಬೆಣ್ಣೆಗಳಿಂದೆಯುಂ ಸುಚರಿತಸುತನ ಭಿಕ್ಷಾನ್ನದಿಂದೆಯುಂ ತಣಿದು ಭಕ್ತಸಂಸ್ಪೃಷ್ಟವಸ್ತುಪ್ರೀತಿಯಂ ಪ್ರಕಟಿಸಿದುದು ! ಈ ಪೇರೆರ್ದೆ

ಯ್ಯೆಸೆ ಲಕ್ಷ್ಮೀಕೌಸ್ತುಭವನಮಾಲೆಗಳನಿನಿಸಿನಿಸುಂ ಕೆಲಕ್ಕೆ ತೊಲಗಿ
ಯಿಂಬುಗೊಳಿಸಿ ಭೃಗುಮುನಿಯಡಿಗುಱುಪನಂಗೀಕರಿಸಿ ತನ್ನ ಸತ್ವಗುಣ
ಮುಂ ಬಿತ್ತರಿಸಿದುದು ! ಈ ನಿಡುದೋಳ್ಗಳ್ಳೆಸೆ ದಿವ್ಯಮಹಿಷೀಸಂಶ್ಲೇಷ
ದೊಳ್ಳಾಸಜನಾಗಿರ್ದುಂ ನರೆತೆರೆಸೆರೆಗಳಿಂ ನಿಚಿತನಾದ ಕುಚೇಲನೊ
ಲಂ ತಕ್ಕವಿಸಿ ಪೆರ್ಕಳಂಗೊಂಡು ತನ್ನ ವಾತ್ಸಲ್ಯಮುಂ ಪೊಗಟ್ಟುದು
ಈ ಸಿರಿಮೊಗವ್ಯ್ಯಸೆ ಯೋಗಿಗಳ ಬಗೆಗೆ ಸುಟುವುದೋಱದಿರ್ದು
ಎನ್ನಿದಿರೊಳ್ಮೊಳಿನಗೆಯುಂ ಕುಳಿರ್ನೋಟಮುಮಾಗಿ ನೆಲಸಿ ತನ್ನ ಸೌಶಿ
ಲ್ಯಮುಂ ಸೊಲ್ಲಿಸಿದುದು ! ಈ ಸಿರಿಮುಡಿಯ್ಯೆಸೆ ಉಭಯ ವಿಭೂತಿಯೊ
ತನಕ್ಕೆ ತಕ್ಕ ರನ್ನಮುಗುಡಮುಂ ಧರಿಸಿಯುಂ ತಿರುಕುಳಿಪಾರ್ವರಡಿಗೆಱ
ತನ್ನ ಸ್ವಾತಂತ್ರ್ಯಮುಂ ತೋಱುದುದು !

ಎಂದಿಂತು ದಿವ್ಯಾವಯವಂಗಳ ಚರಿತ್ರಮುಂ ನಿರವಿಸಿ ಸೌಂದರ್ಯ
ಮನೆರ್ದೆಯೊಳ್ಬಂದಿಗೊಳಿಸಿ ಬಣ್ಣಿಸಿದನದೆಂತೆನೆ :—

— ಚೆಲ್ವರಾಯನ ಸೌಂದರ್ಯ —

ಸಿರಿಮೊಗದಾವರೆಯೊಳ್ಗಳೆಯಿಂದಮೋ ಕುರುಳ್ಗಟ್ಟಲೆಯೊಳ್ ಕೆ
ಣದಿಂದಮೋ ತನ್ನ ತಾಯ್ವನೆಯೆನಿಪ ಸಿರಿಗಣ್ಣೊಳ್ ಪ್ರಣಯದಿಂ
ಮೋ ಏತಱಿಂದಾದೊಡಂ ಸೂರ್ಯನೆಯ್ತಂದಿರ್ಪುದೆ ದಿಟಂ ; ಆದೊಡ
ಕಿರೀಟರತ್ನಂಗಳ್ ಕೀರ್ತಿವಡೆದುವು । ಪಣೆವಟ್ಟದ ರನ್ನವೆಳಗಿಂಗಳ್ಕಿ ಕೇ
ಗಣ್ಗ ನಡೆದಲ್ಲಿ ಎಳನಗೆಯ ಜೊನ್ನವೊಟ್ಟಿಬಟ್ಟುವಿನಂ ಮೋಗಣ್ಗ ಪಾಯ್ದು
ಸುಟುಗೊಂಡು ನಟ್ಟನಡುವೆ ನೆಗೆವ ಸಿರಿವಣ್ಣೆಳಗಿನಬ್ಬರಕ್ಕೆರ್ಬಗಿಯು
ಗಿರ್ಕೆಲಕ್ಕೆ ಸರಿಯುತ್ತಲ್ಲಿಯುಂ ಸಿರಿಗೆಯ್ಗಳಿಂ ನೆಗಪಿದ ಸಂಕು ಪಾಱು
ಬಳೆಗಳೆಂಬ ಸಸಿನೇಸರ್ಗಳಂ ಕಂಡು ಕಾತರಿಸಿ ಕುರುಳ್ಗಟ್ಟಲೆ ನುಣ್ಬ
ಯಂ ಪತ್ತಿ ಪದುಳದ್ದೊಳಿರ್ಕುಂ ; ಆದೊಡಂ ಸಿರಿಮೊಗಸಸಿ ಜಸಂಬ
ದುದು । ಸಿರಿಮೆಯ್ಯ ತನಿವೊಗರೆಂಬ ಪನ್ನೀರ್ಪೊನಲುಂ ಸಿರಿದೋಳ್ಗಳೆಂಬ
ಪೆರ್ದೆರೆಗಳುಂ ಕೊರಲೊಳ್ಧರಿಸಿದ ಮುತ್ತಿನ ಕಂಠಸರದ ನೆವದಿಂ ಪರಿದು

ವರ್ಪ ಬಾಂಬೊಟ್ಟಿಯುಂ ಕೆಂಪುವಚ್ಚದ ಕದಿರ್ಗಳೆಂಬ ಪವಳಗುಡಿಗಳುಂ ಕೊರಲ್ಸಿಂಕುವಾಗಿ ತೋರ್ಪ ಪೇರೆರ್ದೆಯುಂ ಕಡಲ್ಗೆತ್ತ ಕೌಸ್ತುಭವುಂ ಸಿರಿಯರಸಿಯುಂ ನೆಲಸಿರ್ಕುಂ ; ಆದೊಡಂ ಬಗೆಯೊಳೊಗೆದ ಸಸಿಯು ಸೋದರಸ್ನೇಹಂ ನೆಗಟ್ಟಿತ್ತವಡೆದುದು । ಒಳಗಿಡಿದ ಮೂಜುಂಜಗದ ಭಾರ ದಿಂ ಸರಿಯದಂತೆ ರನ್ನದ ಪೊಡೆಗಟ್ಟುಗಟ್ಟೆರ್ಪುದು ; ಆದೊಡಂ ಬೆಣ್ಣೆಗಳ ವಿನೋಳ್ಗೋಪಿ ಕಟ್ಟಿದ ಕಡೆದಾವು ಪೊಗಟ್ಟಿತ್ತವಡೆದುದು । ಎರ್ದೆಯೊಳಿರ್ಪ ರಾಣಿಯ ಮೆಯ್ವೊಗರಿಂದಮೆ ಪೊದೆದ ದುಗುಲಂ ಪೊಂಬಣ್ಣಮಾದುದು; ಆದೊಡಂ ಪೀತಾಂಬರಂ ಪೆಸರ್ವೆತ್ತುದು। ಉಡೆನೂಲ ಕೆಂಬರಲ್ಗಳ ಪೊಗರ್ಗಳಿಂದಮೆ ತೊಡೆಗಳ್ಕೆಂಪಡರ್ದುವು ; ಆದೊಡಂ ಮುಂ ಪತ್ತಿದ ಮಧುಕೈಟಭರ ನೆತ್ತರ್ ನೆವಮಾದುದು । ಅಶರಣ್ಯಶರಣ್ಯಮೆನಿಪ ದಿವ್ಯ ಪಾದಾಂಬುಜಂಗಳ ಸೋಂಕಿನಿಂದಮೆ ಕಿಱುದೊಡೆಗಳ್ ನವಿರ್ದಳೆದುವು ; ಆದೊಡಂ ಪಾದಪೀಠದೊಳಿರ್ಪ ಪೊಡವಿವಡದಿಯ ಮೆಯ್ಸೋಂಕು ನ್ಯೆಮೆ ವೆತ್ತುದು । ಮತ್ತಂ ಪಾದಂಗಳೆಂಬ ಕಲ್ಪಪಾದಪಂಗಳ ಬೆರಲ್ಗೊಂಬುಗಳ ಪೂದೊಂಬೆಗಳೆಂಬ ನೆನಪಂ ನೆಗಟ್ಟುತ್ತೆ ಸಕಲಜಗಮನೇಕವೇಳೆಯೊಳ್ ಪಾವನಂಗೆಯ್ವ ತವಕದೊಳ್ಪತ್ತುಂ ಮೆಯ್ವೆತ್ತು ಪಾಯ್ವ ನಖರುಚಿಗಂ ಗಾಪ್ರವಾಹದೊಳ್ಮಿಂದೆನ್ನ ಕಂದುಗಳಂ ಕಳೆವೆಂ। ಪರಿಮಳಕ್ಕೆಳಸಿ ಕಾಲಿ ನೆಡೆಯೊಳ್ಸುತ್ತುಂ ಮುತ್ತಿದ ತುಂಬಿಗಳಿಂದೆಸೆವ ಸಾಸಿರ್ಪೆಸರ ಪೂಜೆಯ ತಾವರೆಯೊಳ್ಸರಸಿ ನೀಲದ ಪೆಂಡೆಯಂಗಳಂ ಧರಿಸಿದ ಸಿರಿಯಡಿಗಳನಱಿಸಿ ಕುಱುಪುಗಂಡೆಱಿಗಿ ಕೃತಾರ್ಥನಪ್ಪೆಂ। ಪೊಡವಿವಡದಿಯ ಕೆಯ್ಸೋಂಕಿ ನೊಳ್ ಕಂಟಕಿತಮಾಗಿರ್ಪುದಱಿಂದಡಿದಾವರೆಯ ಪೇರ್ದಂಟೆನಿಪ ಜಂಘೆ ಗಳಂ ಕಂಡೆನ್ನ ಭವಪಥಜಾಂಘಿಕತ್ವಮುಂ ಕಳೆವೆಂ । ಓರಡಿಯ ಪೊರ್ದು ಗೆಯಿಂ ನೆಗಟ್ಟಿತ್ತವೆತ್ತ ಗಂಗೆಯುಂ ಕೇಟ್ಟಿಡಿಸಲೆಂದಿರ್ನೆಯ್ದಿಳಿದ ಎರಡುಂ ಸಿರಿಯಡಿಗಳ್ಗೆ ಪಾಯ್ವ ಜಗುನೆಯಂತಿರ್ಪ ತೋಱದೊಡೆಗಳಂ ಸೇಱಿ ಯೆನ್ನ ಬಗೆಯ ಬಡತನಮಂ ಪರಿಹರಿಸುವೆಂ। ವಲಿಗಳೆಂಬ ತೆರೆಗಳುಂ

ನಾಭಿಯೆಂಬ ಸುೞಿಯುಮಾಗಿ ಪಾಯ್ವ ಶರೀರಕಾಂತಿಪ್ರವಾಹದೊಳ್ ಮುೞುಂಗಿ ಎನ್ನ ತಾಪತ್ರಯಮಂ ತಱುಬುವೆಂ। ಪೊದೆದ ದುಗುಲದ ತೆರೆಗಳುಂ ಮುತ್ತಿನ ಸರಂಗಳೆಂಬ ನೊರೆಗಳುಂ ಪೊಣ್ಮಿದ ಕೌಸ್ತುಭಮುಂ ಸಿರಿಯುಮಾಗಿರ್ಪುದಱಿಂ ಕಡಲ ತಡಿಯಂ ಪೋಲ್ವ ಪೇರೆರ್ದೆಯೊಳ್ ನೆಲಸಿ ಅನಿಮಿಷತ್ವಮಂ ಪಡೆದೆನ್ನ ಕಣ್ಗಳಿಂದಮುರ್ದುಂಡು ತಣಿವೆಂ। ಶ್ವೇತೋರ್ಧ್ವಪುಂಡ್ರದ ನೆವದೊಳ್ ನೆಗೆದ ಕೇದಗೆಯ ಕೊನೆಯೆಸಳ್ಗಳುಂ ನಿಡುಗಣ್ದಾವರೆಗಳುಂ ನಾಸಿಗೆಯೆಂಬ ಸಂಪಗೆಯುಂ ಬಾಯ್ದೆಱೆಯೆಂಬ ಬಂದುಗೆಯುಂ ಪಲ್ಮೊಲ್ಲೆಗಳುಮುರ್ದಿರೆ ಸಿರಿರಾಣಿಯ ಕೆಯ್ಯೊಳ್ ಪಿಡಿದಾಡಲ್ಕೆಂದು ಕೊರಲ್ಗಾವಿನೊಳ್ ಕಟ್ಟಿದ ಪೊಸವಗೆಯ ಪೂಸೆಂಡಂ ಪೋಲ್ವ ಮೊಗದ ಸೌಗಂಧ್ಯಮನಾಘ್ರಾಣಿಸಿ ಮನದ ಜಾಡ್ಯಮಂ ಜಾಱಿಸುವೆಂ। ಮತ್ತಂ ಪೊಸಪೊಸವೊಗರ್ಗಳಿಂ ಪೊಂಗುವ ಮುಗುಡಮುಂ ಪೊಳೆವ ಪಣೆಯುಂ ಪೆಱೆಗೆಱೆನಾಮಮುಂ ನಿಮಿರ್ದ ಪುರ್ಬುಂ ನೀಳ್ದ ಕಣ್ಣುಂ ಪೆಂಪುವಡೆದ ನಾಸಾಚಂಪಕಮುಂ ತೊಳಪ ಕದಂಪುಂ ತೊಂಡೆ ವಾಯ್ದೆಱೆಯುಂ ಮುದ್ದುನಗೆಯುಂ ಮೊನೆವಲ್ಲುಂ ಒಳ್ಗಿವಿಯುಂ ಒಲೆವ ಕುಂಡಲಮುಂ ದುಂಡುಗೊರಲುಂ ತೋಱಗಂದಮುಂ ತಟ್ಟು ತೋಳುಂ ತಾವರೆಗೆಯ್ಯುಂ ಬಲಮುರಿಸಂಕುಂ ಪಾಱುಂಬಳೆಕ್ಕೈದುಂ ಪೇರೆರ್ದೆಯುಂ ಕಣ್ಮಸರಂಗಳುಂ ಕೌಸ್ತುಭಮಣಿಯುಂ ಸಿರಿವಚ್ಚೆ ಗುಱುಪುಂ ಸಿರಿರಾಣಿಯುಂ ಪೊಸದೊಳಚಿಸರಮುಂ ಪೊನ್ನುಡೆಯುಂ ಬೆಳ್ಜನ್ನನೂಲುಂ ರನ್ನವಚ್ಚಂಗಳುಂ ರಂಜಿಪ ಪೊಡೆಗಟ್ಟುಂ ತೆಳ್ವಸಿಱುಂ ತಿವಳಿಯುಂ ಬಡನಡುವುಂ ಬಣ್ಣವುಡೆಯುಂ ಪೊನ್ನುಡೆನೂಲುಂ ಪೊದಟ್ಟಿ ಕಾಂಚಿಯುಂ ಬಲ್ತೊಡೆಯುಂ ಬಟ್ಟ ಮೊಣಕಾಲುಂ ಸ್ನಿಗ್ಧಜಂಘೆಯುಂ ಸಿರಿಯಡಿಗಳುಮಾದ ದಿವ್ಯಮಂಗಳವಿಗ್ರಹಮಂ ನಿಟ್ಟಿಸಿ ತಣಿಯದೆ ಕಟ್ಟಾಸೆಯಿಂ ದಕ್ಕುಗೊಳಲ್ಕೆಳಸಿ ದಿಟ್ಟಿವಾಗಿಲಿಂದೊಳಪುಗಿಸಿ ಬಗೆವನೆಯೊಳಿರಿಸಿ ಭಾವಿಸುವಿನಂ—ಕನಸಿನಂತೆಯುಂ ಯೋಗಸಾಕ್ಷಾತ್ಕಾರದಂತೆಯು

ಮಲ್ಲದೆ ಪ್ರತ್ಯಕ್ಷಮಾಗಿ ಮುದ್ದುಮೊಗಮುಂ ಮೊಳೆನಗೆಯುಂ ಒಲ್ಮೆ ನೋಟಮುಂ ಒಳ್ಪಾತುಮಾಗಿ ನೆಲೆನಿಂದು—" ಎಲೆಯರಸ! ನಿನ್ನ ಭಕ್ತಿಗೆ ಮೆಚ್ಚಿ ದಶರಥನಂತೆಯುಂ ವಸುದೇವನಂತೆಯುಂ ನಿನ್ನಂ ತಂದೆ ಗೆತ್ತು ನಿನ್ನೆರ್ದೆಯೊಳ್ ನೆಲಸಿದೆಂ. ನಿನಗೌರಸಪುತ್ರನಾಗಿ ಜನಿಸುವೆಂ. ನೀನುಮಂಜದೆ ಅಚ್ಚರಿವಡೆಯದೆ ಎನ್ನಂ ಎನ್ನ ವಾತ್ಸಲ್ಯಮುಮಂ ನೆನೆದು ಪದುಳಂಗೊಂಡು ನಿನ್ನೊಳ್ಗಳೆಯಂ ಅಳಹಿಯ ಸಿಂಗರಾರ್ಯರ್ಗಂ ನಿನ್ನ ಮನದನ್ನಳ್ ಅಮೃತಾಂಬೆಗಮಲ್ಲದೆ ಪೆಱರೊರ್ವರ್ಗಮುಱುಪದೆ ಮೌನದೊಳಿರ್ಪುದು. ಆನುಂ ನಿನ್ನರಮನೆಯ ಕೃಷ್ಣಾವತಾರದ ಚಾತುರ್ಯಮನೊಂದುವೆರಸಿ ಒಳ್ಪುಗೊಳಿಸಿ ಪಲವುಂ ದಿವ್ಯಾದ್ಭುತಚರಿತಂಗಳ ನೆಸಗಿ ದುಷ್ಟರನಿಬರಂ ಮೆಟ್ಟಿ ಶಿಷ್ಟರಂ ನಟ್ಟುನೆಲೆಗೊಳಿಸಿ ಸಾತ್ವಿಕ ಧರ್ಮಂಗಳಂ ಸ್ಥಾಪಿಸುವೆಂ. ಕಲಿದೋಷಮಂ ಕಳೆದು ಕೃತಯುಗದೊಳಂತಂತು ಸಕಲವರ್ಣಾಶ್ರಮಧರ್ಮಂಗಳಂ ಸಂಗತಿಗೊಳಿಸುವೆಂ" ಎಂದು ಪಿರ್ಪುದುಂ; ಅರಸಂ ಹಸಾದಮೆಂದಾಣತಿಯಂ ಸಿರದೊಳಾಂತು ಕಣ್ದೆಱೆ ವುದುಂ; ಅರ್ಚಕರ್ಕೊರಲ್ಗೆ ದುಂಡಮಲ್ಲಿಗೆದಂಡೆಯಂ ತಲೆಯೆರ್ದೆಭುಜಂ ಗಳ್ಗೆ ಶಠಕೋಪಮಂ ಕೆಯ್ಗೆ ತೀರ್ಥಮಂ ಬಱಿಕ್ಕಭಯಹಸ್ತಮಂ ಕುಡೆ, ಅಂಗೀಕರಿಸಿ ಕೃತಾರ್ಥತೆವೆತ್ತು ಅತ್ತಣಿಂ ಪೊಱಮಟ್ಟು **ಚೆಲ್ವರ** ಸನ್ನಿಧಿಯೊಳ್ ನಿಂದು ಕೆಯ್ಮುಗಿದೆಣಿಸಿದಂ :—

— ಚೆಲ್ವರಾಯನನ್ನು ದರ್ಶನಮಾಡಿ ಎಣಿಸಿದ ಪ್ರಕಾರ —

ಶ್ರೀಮನ್ನಾರಾಯಣಂ ತನ್ನ ಸನ್ನಿಧಿವರೆಗಮೆಯ್ತಂದು ವಂದನಂಗೆಯ್ವುದರ್ಕಾಱದ ಮುದುಪರುಂ ಮಕ್ಕಳುಂ ಪೆಟಿವರುಂ ಬೇನೆಯುಡಿಸಿದರುಂ ದರ್ಶನಂಗೆಯ್ದು ಬರ್ದುಂಕಲೆಂದು ಉಕ್ಕೆವದೊಳ್ಬೀದಿಯಂ ಬಲವರ್ಪುದರ್ಕೆ ಪೊತ್ತ ಪೊಸವರಿಜಿಡ್ಡೆಸೆ! ನೀಳ್ದ ಮಗುಡಮುಂ ನಸುಗವಿದ ನೊಸಲ್ವಟ್ಟಮುಂ ಸಿರಿಗುರುಳುಂ ನುಣ್ಬಣೆಯುಂ ಪೊಳೆವ ಕತ್ತುರಿಯ ತಿಳಕಮುಂ ಕುಡುವುರ್ವುಂ ಬಗಸೆಗಣ್ಣುಂ ಅರೆವಿರಿದ ಸಂಪಗೆನನೆಯುಂ

ಪಱಿವ ಮೂಗುಂ ಎಳನಗೆಯುಂ ಚೆಂಬಾಯ್ದೞೆಯುಂ ಗೆಱಗೊರಲುಂ ನೀಳ್ದ ತೋಳುಂ ನೆಗಪಿದ ಶಂಕಚಕ್ರಂಗಳುಂ ಒಯ್ಯರದೊಳೂಱಿದ ಗದೆಯುಂ ನಸುಮುಂಬರಿಸಿದ ಅಭಯಹಸ್ತಮುಂ ಬಡನಡುವಿನೊಳ್ ಬಿಗಿದು ಕಟ್ಟಿದ ಪೊಂಬಟ್ಟೆದಟ್ಟಿಯುಂ ಪದ್ಮಪೀಠದೊಳ್ನೆಲಸಿದ ಪಾದ ಪದ್ಮಮುಮಾದ ನೆಲೆಯಂ ನಿಟ್ಟಿಸೆ—ಇರ್ಕೆಲದೊಳ್ ಭುಜಮಂ ಭುಜಂ ಸೋಂಕೆ ನಿಂದಿರ್ಪ ರಾಣಿಯರೊಡವೆರಸಿ ಕುಣಿಯುತೆಳಸಿದಂತೆಯುಂ ನಗುತ್ತೆ ನುಡಿಸುತ್ತೆ ವಂದು ಎನ್ನೊಡವೆರೆದಂತೆಯುಂ ಒಳಪುಗುವಂತೆ ಯುಂ ತೋಱುತಿದೆ। ಮತ್ತಂ ಕಿರೀಟದೊಳೊಡೆತನಮುಂ ದಿಟ್ಟಿಯೊಳ್ಕಾ ರುಣ್ಯಮುಂ ನಸುನಗೆಯೊಳ್ ವಾತ್ಸಲ್ಯಮುಂ ಕೆಯ್ಗಳೊಳಭಯಪ್ರದಾನ ಮುಂ ಎರ್ದೆಯೊಳ್ಸಿರಿಯುಂ ಪೊಡೆಗಟ್ಟಿನೊಳ್ ಸೌಲಭ್ಯಮುಂ ಪೊಕ್ಕು ೞಿನೊಳ್ ಜಗತ್ಕಾರಣತ್ವಮುಂ ಸಿರಿಯಡಿಯೊಳುಪಾಯಮುಂ ಇರ್ಕೆಲದ ರಾಣಿಯರೊಳ್ ಪುರುಷಕಾರತ್ವಮುಂ ಪ್ರತ್ಯಕ್ಷಮಾಗಿ ತೋಱುತಿದೆ। ಮತ್ತಮೀವಸ್ತು ನಿಟ್ಟಿಸಿದೊಡನೆ ಕಣ್ಮನಂಗಳಂ ಕವರ್ದುಕೊಳುತಿದೆ। ಬಿಡು ಗಣ್ಣರ್ ಕುಡಿವಮರ್ದಿನಂತೆ ಬೆಡಗುದೋಱದೆ ಏಪೊೞ್ತುಮೊಡವಿಡದೆ ಸವಿದೊಡಂ ತಣಿವುಗುಡದೆ ಸವಿಯೇಱುತಿದೆ। ಈವಸ್ತುವಂ ನಿಟ್ಟಿಪೆನ್ನ ಕಣ್ಗಳ್ ಪಲವಕ್ಕೆ, ಜಾನಿಪ ಮನಮುಂ ವಿಭುವಕ್ಕೆ, ಆಳ್ಗಯ್ವ ಮೆಯ್ಯು ಮಿರ್ಮಡಿಯುಂ ನೂರ್ಮಡಿಯುಂ ಸಾಸಿರ್ಮಡಿಯುಮಕ್ಕೆ ; ಆದೊಡಂ ತಣಿ ವುದೋಪುದರಿದು। ಒಂದೊಂದವಯವದ ಸೌಂದರ್ಯಮೆ ಮೂಜಗಮಂ ಬೆಲೆಗೆಯ್ದುಕೊಳಲೆಳಸುತ್ತಿದೆ। ಸರ್ವಾವಯವಸೌಂದರ್ಯಮಂ ಭಾವಿಸಲಾ ನೆನಿತರವಂ ? ಆದೊಡಂ ಕಡಲಂ ಕಱುಗೊೞಿಗುವಳ್ಳದೊಳಡಕಂಗೆಯ್ವ ಅಘಟಿತಘಟನಾಸಮರ್ಥನಪ್ಪ ಜಗತ್ಪತಿಯೆ ಸರ್ವಮಂ ನಿರ್ವಹಿಸುಗೆ। ತನ್ನಂ ನಂಬಿದರ ತಮಮಂ ತೞ್ಗಿಸಿ ಸತ್ವಮನೇಱ್ತರಂಗೊಳಿಸಿ ಬುದ್ಧಿಯಂ ಪ್ರಬುದ್ಧಮೆನಿಸಿ ಪಿರಿಯರೊಳ್ ಬೆರಕೆಗೊಳಿಸಿ ಸದಾಚಾರ್ಯಸಮಾಶ್ರಯಣಂ ಗೆಯಿಸಿ ಮುಕ್ತಿವರೆಗಮೆಸಗಲ್ಕುಪಕಾರಂಗಳನೆಸಗಿ ಸಲಪುಗುಂ। ತಾ

ನೊಡೆಯನುಮಾನೊಡವೆಯುಮೆಂಬುದನಱಿಯದಿರ್ದೊಡಮನಾದಿಕಾಲ ದಿಂದೀವರೆಗಮೆನ್ನನುೞಿಪಿ ಈಜನ್ಮದೊಳ್ ಯದುವಂಶದೊಳ್ ತನ್ನ ಭಕ್ತರೆಂದು ನೆಗಟ್ದ ಮಹಿಶೂರಪುರದರಸುಗಳೊಳ್ ರಾಜಋಷಿಯೆನಿಪ ದೇವರಾಜರಸನ ಬಸಿಱೊಳ್ ಬರಿಸಿ ಆಚಾರ್ಯವರ್ಯರೆನಿಪ ರಾಮಾನುಜ ರಡಿಗಳಂ ಸೇರಿಸಿ ತನ್ನವನೆಂದಭಿಮಾನಿಸಿದಂ। ಈಮೇಲೆನ್ನ ಸಲಪುವುದಚ್ಚರಿ ಯಲ್ತು ; ಆದೊಡಮೆನ್ನ ಚಾಪಲ್ಯದಿಂ ಬಿನ್ನವಿಪೆಂ। ಎನ್ನೊಳ್ ತಪ್ಪೆನಿ ತಾನುಮುಳ್ಳೊಡನಿತುಮಂ ಸೈರಿಸಿ ದಯೆಯಿಂದೆನ್ನಂ ಸಲಪುವುದು—

ಎಂದು ವಂದನಂಗೆಯ್ದು ತೀರ್ಥಪ್ರಸಾದಮಂ ಸ್ವೀಕರಿಸಿ ಪೊಱ ಗಣ್ಗೆ ವಂದು, ಪಲವುಂ ವಾದ್ಯಘೋಷಂಗಳುಮನುಗ್ಗಡಿಪ ಕೈವಾರಿ ಗಳ ಕೈವಾರದ ದನಿಯುಮಂ ತಂತಮ್ಮ ಸಿರಿವಾಳಿಗೆಗಳ ಬಾಗಿಲೊಳ್ ನಿಂದು ಪರಸುವ ಹದಿಬದೆಯರ ಪರಕೆದನಿಯುಮನಾಲಿಸುತ್ತೆ ಸಂತಸ ದಿಂದರಮನೆಯಂ ಪೊಕ್ಕು ಒಳವಾಗಿಲೊಳ್ ನಿಂದು, ಅಲ್ಲಿ ಸಾಮಂತ ರಾಯರಂ ಪುರೋಹಿತಾಮಾತ್ಯಸೇನಾಪತಿಭೃತ್ಯವರ್ಗಮುಮಂ ಕಳುಪಿ, ಅಳಹಿಯಸಿಂಗಾರಾರ್ಯರೊಡನೊಳಚೌಕಿಯ ಪೊಂಜಗಲಿಯೊಳ್ ಕುಳ್ಳಿ ರ್ದುಂ ;

ಅರಸನ ಮನದ ಗೆಲ್ಲಮಂ ಕಳಕಳಿಪ ಮೊಗಸಿರಿಯುಮಂ ಕಂ ಡಳಹಿಯಸಿಂಗರಾರ್ಯಂ ನುಡಿದನದೆಂತೆನೆ :—

ದೇವ ! ಚಿತ್ತವಿಪುದು. ಈಗಳ್ ದೇವರಂ ನಿರವಿಸೆ ದೇವಲೋ ಕದಿಂದಿೞಿದಂತೆಯುಮಭೀಷ್ಟವರಮಂ ಪಡೆದಂತೆಯುಂ ಅಮೃತಪಾನಂ ಗೆಯ್ದಂತೆಯುಂ ದಿವ್ಯಶಕ್ತ್ಯಾವಿಷ್ಟನಾದಂತೆಯುಂ ದೇವತೆಯಂ ಬಸಂಗೆ ಯ್ದಂತೆಯುಂ ಸಾಕ್ಷಾದ್ದೇವತೆಯಂತೆಯುಂ ತೋಱುತಿದೆ. ಇದರ್ಕೆ ಕಾರಣಮಲ್ಪಮಾಗಿರದು. ಎಂತಪ್ಪ ಸಂತಸದೊಳಂ ಕದುಬುಗೊಳದೆ ಕಡಲ ಮಡುವಿನಂತಿರ್ಪ ದೇವರ ಚಿತ್ತದೊಳ್ ಪೊಣ್ಮುವ ಸಂತಸದೆರೆಗಳ್

ಮೊಗಸಿರಿಯೊಳ್ ಪಡಿನೆೞಲೊಗ್ಗಳುತ್ತಿದೆ. ಇದಂ ತಿಳುಪವೇೞ್ಪುದು, ಎಂಬುದುಂ ;

ಈಬೆಸಗೊಳ್ವ ಕಜ್ಜದ ಬಲ್ಪನಾರಯ್ದು ಬಳಸಿದೂೞಿಗದವರ್ ಪಿಂದೆಗೆದು ದೂರದೊಳ್ ನಿಶ್ಶಬ್ದಮಾಗಿ ನಿಂದಿರೆ ರಾಯನಿವನಂ ಪತ್ತೆ ಬರಿಸಿ ಕಿವಿಯೊಳಾವೃತ್ತಾಂತಮನಿತುಮಂ ಪೇೞ್ವುದುಂ ; ಇವನುಂ ಕಿವಿವಟ್ಟೆಯೊಳ್ಪಾಯ್ದು ಬಗೆಗೆಱೆಯಂ ತುಂಬಿದ ಸಂತಸದ ಪೊನಲಂ ಕೋಡಿಗೊಳಿಸುವಂತೆ ನಲ್ನುಡಿಗಳಂ ನುಡಿದನದೆಂತೆನೆ :—

" ಇಂದೈಸೆ ಜಗಂ ಸನಾಥಮಾದುದು ; ಯದುಕುಲಮೇೞ್ಗೆವಡೆದುದು; ಸಂಸಾರಂ ಸಾರಮೆನಿಸಿದುದು; ರಾಜಧರ್ಮಂ ಪೆರ್ಮೆವೆತ್ತುದು ; ಕನ್ನಡನಾಡುನ್ನತಿದಾಳ್ದುದು ; ಪ್ರಜೆಯ ಸೌಖ್ಯಂ ಪ್ರಬಲಮಾಯ್ತು ; ಸೇವರೇೞ್ಗೆ ದಿಟಂಗೊಂಡುದು ; ಪಾರ್ವರಾಸೆ ಪಣ್ದುಳಿದುದು ; ಎನ್ನಿಷ್ಟಾರ್ಥಮೀಡೇಱಿದುದು " ಎಂದು ನುಡಿದು ಪರಸಿ ಮನೆಗೆ ಪೋಪುದುಂ ;

ಅರಸನುಮಂತಪುರಮಂ ಸಾರ್ದು ಅಲ್ಲಿ ಇದಿರ್ವರ್ಪ ರಾಣಿಯ ಕೈಲಾಗಿನೊಳ್ ಸಜ್ಜೆವನೆಯುಂ ಸೇರಿ, ಕಾಂಚನಮಯಮಂಚದೊಳ್ ಕುಳ್ಳಿರ್ದು ನಗುತ್ತೆ—" ಎಲೆಯರಸಿ, ನಿನಗೊಂದೊಸಗೆಯಂ ಪೇೞ್ವೆಂ. ಎನಗೀವ ಉಚಿತಮಾವುದು ? " ಎನೆ ; ರಾಣಿಯುಮೊಡನೆ ನಿಟ್ಟಿಸಿ ಮಣಿದ ದಿಟ್ಟಿಯುಂ ನಸುಬಾಗಿದ ಶಿರಮುಂ ಮೊಳೆವ ನಗೆಯುಂ ಮೊಗದೋರ್ಪ ವಿನಯಮುಮಾಗಿ ಬಿನ್ನವಿಸಿದಳ್ :—

" ರಾಯ ! ಚಿತ್ತವಿಪುದು. ಆನುಂ ದೇವರೊಡನೆಯಾದುದಱಿಂ ದೇವರೊಡೆತನದೊಳಡಕಮಾದುದಲ್ಲದೆ ಎನಗೆಂದು ಪೆಱತೊಂದೊಡವೆಯುಂ ಪೆಱತೊಂದೊಡೆತನಮುಮಿಲ್ಲದೆ ಆನೀವುದೆತ್ತಣದು ? ದೇವರ್ ನಿರವಿಸಿದುದನಾಲಿಸಿ ಎನ್ನ ಮನದೊಳ್ ಪೊಣ್ಮಿದ ಸಂತಸದಿಂ ದೇವರ ಸಂತಸಮನಿರ್ಮಡಿಗೊಳಿಸುವೆಂ " ಎಂಬುದುಂ ;

ಬಿನದಕ್ಕಂ ಬಿನಯಕ್ಕಂ ಬಿನ್ನಣಕ್ಕಂ ತಕ್ಕ ನುಡಿಯುಂ ಕೇಳ್ದು ಪೆರ್ಗಳಿಸಿ ಪೇಳ್ದಂ :—'' ಎಲೆ ರಾಣಿ ! ಶ್ರೀಮನ್ನಾರಾಯಣನ ಕೃಪೆಗೆ ನೆಮಮುಮೆಲ್ಲೆಯುಮಿಲ್ಲದಿರ್ಪುದಱಿಂದೆಯುಂ ಎಮ್ಮ ಯಾದವಕುಲದೊಳ್ ಪ್ರೀತ್ಯತಿಶಯದಿಂದೆಯುಂ ರಾಜರಸದೇವರಾಜರಸರ ಭಕ್ತಿಪ್ರಕರ್ಷದಿಂದೆಯುಂ ಎಮ್ಮ ಭಾಗ್ಯೋದಯದಿಂದೆಯುಂ ಮುಂ ಪೃಶ್ನಿಸುತಪರೊಳಂ ಅದಿತಿಕಶ್ಯಪರೊಳಂ ದೇವಕೀವಸುದೇವರೊಳಂ ಆವಿರ್ಭವಿಸಿದಂತೆಮ್ಮ ಬಸಿಱೊಳ್ ಬಂದು ಜಗಮಂ ಸಲಪುವೆನೆಂದು ತನ್ನ ಚರ್ಾವತಾರಮರ್ಯಾದೆಯುಂ ಮೀಱಿ ಸಿರಿನಾಯ್ಕೆಱದು ನಿರವಿಸಿ ಎನ್ನೆರ್ದೆಯೊಳ್ ಬಂದು ನಿಂದಂ.'' ಎಂಬುದುಂ ;

ರಾಣಿಯುಂ ನವಿರ್ದಳೆದು ಅಲಿಸೀರ್ಗಱದು ಕೊರಲ್ಸರಿಗಳಿಂ ಬಿಕ್ಕುತೆ ಬಿನ್ನವಿಸಿದಳ್ :—'' ಜಗದೀಶ್ವರಂ ಸರ್ವತಂತ್ರಸ್ವತಂತ್ರನಾದುದಱಿಂದೆಂತೆಸಗಿದೊಡಂ ತವಿಪರಾರ್ ? ಕಿಱಿದಂ ಪಿರಿದೆನಿಸಿದೊಡಂ ಬೇಡೆಂದು ತಡೆವರಾರ್ ? ತನ್ನೊಳ್ ತಮಗೆ ತಾರತಮ್ಯಮುಂಟಾದೊಡಂ ನೇಸಱ್ ಮೂಡಿದೊಡನೆ ಬಿದುವುಂ ಬೆಳ್ಮುಗಿಲುಮೊಂದೆನಿಸುವಂತೆ ಅವನ ಮ್ಮೆಯುಂ ನಿರವಿಸೆ ಪುಟುವುಂ ಬೊಮ್ಮನುಮೊಂದೇ ತೆಱನ್ನೈಸೆ ! ಆಸ್ವಾಮಿಯ ಕೃಪೆಯಿಂದೆಮ್ಮ ಜನ್ಮಂ ಸಫಲಮಾದುದು. '' ಎಂದೋರೊರ್ವರೀವಗೆಯ ಸಂತಸವಾತುಗಳಂ ಬಳೆಯಿಸುತ್ತಿರುಳಂ ಕಳೆದರ್.

ಪೊಟ್ಟಱಯೊಳೆಟ್ಟರಸಂ ಮಿಂದು ಮುಡಿಯುಟ್ಟು ಸಂಧ್ಯಾವಂದನಮನಾಚರಿಸಿ ನಾಮತೀರ್ಥದ ಚೌಕಿಗೆ ಬಂದು ದೇವತಾಸನ್ನಿಧಿಯೊಳ್ ಕುಳ್ಳಿರ್ದು ಅಳಹಿಯಸಿಂಗರಾರ್ಯರಂ ಬರವೇಳ್ದು ಭರದಿಂ ಪಡಿಯಱರಂ ಕಳುಪಿದಿನಂ ;

— ಅಳಹಿಯ ಸಿಂಗರಾರ್ಯರ ಮನೆ, ಮತ್ತು ಅವರ ಶರೀರ ಮುಂತಾದುವುಗಳ ವರ್ಣನೆ—

ಅವರ್ ಆಳ್ದನಾಣತಿವಿಡಿದು ಕಡುವೇಗದಿಂ ನಡೆತರುತ್ತೆ ಚೆಲ್ಲಿದ

ನೀರಂ, ಬರೆದ ರಂಗವಲ್ಲಿಯ ಗೆಱೆಗಳಂ, ಸಿರಿವೀಥಿಯ ಸಿಂಗರಮಂ ನಿಟ್ಟಿಸು ತುಂ ಬರೆ—ಪೊಱನಾಗಿಲ ಇರ್ಕೆಲದ ಪೆರ್ಜಗಲಿಗಳೊಳ್ ಪಿಡಿದ ಪಲಾ ಶದಂಡಮುಂ, ಉಟ್ಟ ಬೆಳ್ವಟ್ಟೆಯ ಮೇಲೆ ಮೂಱುಂ ಬಳಸುಂ ಸುತ್ತಿದ ಮೌಂಜಿಯುಂ ವಿಮಲಯಜ್ಞೋಪವೀತಮುಂ ಪೊದೆದ ಕೃಷ್ಣಾಜಿನಮುಂ ಧವಳೋರ್ಧ್ವಪುಂಡ್ರಮುಮಾಗಿ ಸತ್ವದ ಬಿತ್ತುಂ ಸತ್ಕರ್ಮದ ಮೊಳೆಯು ಮೆನಿಪ ಎಳವಕ್ಕಳೋದುವ ವೇದಂಗಳ ಪಾವನಧ್ವನಿಯುಂ। ಒಂದೆಡೆಯೊಳ್ ತಳತಳನೆ ಪಳಂಚುವ ಪನ್ನೆರಡುನಾಮಮುಂ ಪೊದೆದುಟ್ಟ ತಳಿರ್ಗಾವಿ ಯುಡೆಗಳುಂ ಧರಿಸಿದ ತುಳಸಿತಾವರೆಮಣಿಗಳಮುಳ್ಸರಂಗಳುಂ ಶಾಂತಿ ರಸಂ ತುಂಬಿ ತುಳುಂಕುವ ಮೊಗಸಿರಿಯುಮಾದ ಎಡೆವರೆಯದ ಕುವರ ರೋದುವ ದಿವ್ಯಪ್ರಬಂಧದ ಬಂಧುರಧ್ವನಿಯುಂ। ಒಂದುವೆರಸಿ ಕಿವಿಗಾನಂ ದಂಬಡೆಯೆ ಕೇಳುತ್ತೆ ಱೆಜಿ ಬಾಗಿಲನೊಳಪೊಕ್ಕಾತೊಟ್ಟೆಯ ನಾಲ್ಕುಂ ದೆಸೆಯ ಜಗಲಿಗಳೊಳಮೊಂದೆಸೆಯೊಳ್ ಕಾವ್ಯಮನೋದುವರುಂ ಒಂದೆ ಡೆಯೊಳ್ ಕರ್ಕಶತರ್ಕಪ್ರವಚನಂಗಳಿಂ ತರ್ಕಿಸುವರುಂ ಒಂದೆಸೆಯೊಳ್ ಧರ್ಮಸಂಶಯಂಗಳಂ ನ್ಯಾಯಾನುಗೃಹೀತಧರ್ಮಶಾಸ್ತ್ರವಚನಂಗಳಿಂ ತೀರ್ಚುವರುಂ ಒಂದೆಡೆಯೊಳ್ ಶ್ರೀಪಾಂಚರಾತ್ರೋದಿತಪಾಂಚಕಾಲಿಕ ಕ್ರಿಯಾಲಾಪಂಗಳನುಪನ್ಯಾಸಂಗೆಯ್ವರುಮಾಗಿರೆ ಅವರ್ಗೆ ಕೆಯ್ಮುಗಿ ದಾಲೋಚಿಸಿದರ್ :— ಕಾಮನೀತಾವನೊರ್ಮೆಯುಂ ಪೊಕ್ಕನಲ್ತು, ಕ್ರೋಧಮೀಧರೆಯೊಳಡಿಯಿಟ್ಟುದಲ್ತು, ಮೋಹಮೀಮಹಿಯಂ ನಿಟ್ಟಿಸಿ ದುದಲ್ತು, ದಮಮೀದೆಸೆಯಂ ಪೆಸರ್ಗೊಂಡುದಲ್ತು, ಮತ್ಸರಮೀಯು ತ್ಸಂಗಮಂ ನೆನೆದುದಲ್ತು, ಶಮದಮಾದಿಗುಣಂಗಳನಿತುಂ ಇಲ್ಲಿ ಗುರು ಕುಲವಾಸದಿಂದೊಳ್ಪುವೆತ್ತು ಜಗದೊಳ್ ಪೊಗೞ್ತೆವಡೆದುವು. ಮತ್ತಮಿದು ಕಲಿಯುಱೆಯದ ನೆಲನುಂ, ಕೇಡಂ ಕಾಣದ ತಾಣಮುಂ, ಹಿಂಸೆ ಸಂಚರಿ ಸದ ಮನೆಯುಂ, ಹಿಸುಣ್ ಸುೞಿಯದ ಬಾಗಿಲುಂ, ಪುಸಿ ಪುಗದ ಅಗರ ಮುಂ, ಪೋರಟೆ ಪೊರ್ದದೆಡೆಯುಂ, ಠಕ್ಕುಱೆಯದ ಠಾವುಂ, ಬೆಕ್ಕಸಂ

ಬೆಱಿಯದಿಕ್ಕೆಯುಂ, ಸಾಸವಿಲ್ಲದ ದೇಶವುಂ, ಮೋಸಂ ಸಲ್ಲದೆಲ್ಲೆಯು ಮೆನಿಸುಗುಂ. ಮತ್ತಮೀಸಾತ್ವಿಕರ್ಗೆ ತೈಕ್ಷ್ಣ್ಯಂ ಬುದ್ಧಿಯೊಳಲ್ಲದೆ ಸ್ವಭಾವಮಂ ಭಜಿಸದು. ಭ್ರಮಣಂ ದೇಗುಲಮಂ ಬಲವರ್ಪುದಱೊ ಳಲ್ಲದೆ ಅಱಿವನನುಸರಿಸದು. ಮಾಲಿನ್ಯಂ ಹೋಮಧೂಮದೊಳಲ್ಲದೆ ಚಿತ್ತಮಂ ಪತ್ತದು. ದೂಷಣಂ ಪೂರ್ವಪಕ್ಷವಿಷಯದೊಳಲ್ಲದೆ ಪರ ಗುಣಂಗಳೊಳ್ ಪಸರಿಸದು. ಮುಖವಿಕಾರಂ ಮುದುಪತನದಿಂದಲ್ಲದೆ ವಿದ್ಯಾಧನಮದಂಗಳಿಂದೊದವದು. ದಂಡಗ್ರಹಣಮಾಶ್ರಮಧರ್ಮಮಪ್ಪು ದಲ್ಲದೆ ನಿಗ್ರಹಮಂ ನೆಗಟ್ಟದು. ಮತ್ತಂ ಇವರ್ ತರ್ಕದೊಳ್ ಗೌತ ಮಕಣಾದರಂ, ಶಬ್ದದೊಳ್ ಪಾಣಿನಿಪತಂಜಲಿಗಳಂ, ಮೀಮಾಂಸೆಯೊಳ್ ಜೈಮಿನಿಶಬರರಂ, ವೇದಾಂತದೊಳ್ ವ್ಯಾಸಬೋಧಾಯನರಂ ದೊರೆ ಗೊಂಡಿರ್ಪರೆಂದವರ್ಗೆ ವಂದಿಸಿ ಒಳನಾಗಿಲಂ ಪೊಕ್ಕು ಪೋಪಿನಂ ;

ಅಲ್ಲಿ ಸುಧಾಧವಳಿತಮಪ್ಪ ಪೆರ್ಜಗಲಿಯೊಳ್ ಬಳಸಿ ಪಾಸಿದ ರನ್ನಗಂಬಳಿಗಳ ನಡುವೆ ಪೊಂಬಲಗೆಯೊಳ್ ತಾರಗೆಗಳ ನಡುವಣ ಪೊಂ ಬೆಟ್ಟನಂತೆಯುಂ, ಬೊಮ್ಮರ ನಡುವಣ ಪೊಂಬಸಿಱನಂತೆಯುಂ, ದೇವತೆ ಗಳ ನಡುವಣ ವಾಸುದೇವನಂತೆಯುಂ ಬಳಸಿ ಕುಳ್ಳಿರ್ದು ಭಕ್ತಿವಿನಯ ವಿಶ್ವಾಸಂಗಳ ಒತ್ತಂಬದಿಂದೇಕಾಗ್ರಚಿತ್ತನಾಗಿ ಪುಸ್ತಕಂಬಿಡಿದು ವಾಚಿ ಪಾಚಾರಸಂಪನ್ನರೆನಿಪ ಪಲವುಂ ಶಿಷ್ಯರ ನಡುವೆ ಶ್ರೀಭಾಷ್ಯಮಂ ಶ್ರುತ ಪ್ರಕಾಶಿಕಾವ್ಯಾಖ್ಯಾನರೀತಿಯಿಂದುಪನ್ಯಾಸಮನೆಸಗುತುಪದೇಶಂಗೆಯ್ವ ವೈಖರಿಯಂ ನಿಟ್ಟಿಸಿ ಮನದೊಳಾಳೋಚಿಸಿದರ್ :—ಈಮಹಾನುಭಾವಂ ಪುಣ್ಣಿಮೆಯ ಚಂದಿರನಂತೆ ತಣ್ಪುವೆತ್ತಿರ್ದೊಡಂ ಮೆಯ್ವೊಗರ್ ಮುಂಗಾರ ಮಿಂಚಿನಂತೆ ಪಳಂಚುತಿದೆ. ಈವೈಷ್ಣವರೇಂ ಧನ್ಯರೋ ! ಆನಾಗಮಿವ ನೊಡನಿರ್ದಿವನೂಟಿಗಂಗೆಯ್ದಿವನುಪದೇಶಂಗೇಳ್ವರ್. ಈಊರುಗರೇಂ ಸುಕೃತಶಾಲಿಗಳೋ ! ಮುಪ್ಪೊತ್ತುಂ ಬಂದು ವಂದಿನಂಗೆಯ್ದಿವನಿಂ ಪರ ಕೆಗೊಳ್ವರ್. ಈನಾಡುಗರೇಂ ಭಾಗ್ಯವಂತರೋ ! ತತ್ತದುತ್ಸವಂಗಳೊಳ್

ಚೆಲ್ವನಾರಣ ರಾಮಾನುಜರೊಡನಿವನುಮಂ ದರ್ಶನಂಗೆಯ್ವರ್. ಮತ್ತಂ ಸರಸ್ವತಿಯುಮೇಂ ಪುಣ್ಯವತಿಯೋ ! ಆವಗಂ ಪ್ರಸನ್ನಮಾಗಿ ಕರುಣಾಮೃತರಸದಿಂ ತುಂಬಿ ಮಾನಸಸರೋವರಮಂ ಪೋಲ್ತಿರ್ಪ ಮೊಗದಾವರೆಯೊಳ್ ನಲಿಯುತಿರ್ಕುಂ. ಈಯೆಡೆಯೊಳ್ ಧರ್ಮಂ ನಾಲ್ಕುಂ ಚರಣಂಗಳಿಂ ಪೂರ್ಣಮಾಗಿರ್ಪುದಱಿಂದಾವಗಂ ಕೃತಯುಗಮಲ್ಲದೆ ಯುಗಾಂತರಂಗಳ ನೆನಪಿಲ್ಲದಿರ್ಕುಂ. ನೆಲದೊಳೀಮಹಾನುಭಾವನುದಿಸಿರ್ಪುದಱಿಂ ನೇಸಱಿಂ ಪೊತ್ತಾಗಸದ ಗರ್ವಂ ಕಿಱಿದಕ್ಕುಂ. ಇವನ ಬಲ್ಮೆಯಿಂ ಧರೆ ಚಲಿಸದಿರ್ಕುಂ. ಮತ್ತಮಿವನಿರವಂ ಭಾವಿಸೆ ಕೃಪೆಯ ಪೊನಲುಂ, ಸಂಸಾರಮೆಂಬ ಕಡಲ ತಡಿಗಾಣಿಪ ಸೇತುವುಂ, ಆಸೆಯೆಂಬ ಬಿಸವಳ್ಳಿಗೆ ನಡುವೇಸಗೆಯುಂ, ಸಂತಸಮೆಂಬ ಅಮರ್ದಿಗೆ ಪೆರ್ಗಡಲುಂ, ಸಿದ್ಧಮಂತ್ರಂಗಳ್ಗೆ ಮಹಿಷಿಯುಂ, ಶಾಂತಿಯೆಂಬ ಪೆಮ್ಮರಕ್ಕೆ ತಾಯ್ವೇರುಂ, ಆಚಾರಂಗಳ ನೆಲೆವೀಡುಂ, ಧರ್ಮಮೆಂಬ ಪೞಯಿಗೆಗೆ ಬಲ್ಗಾವುಂ, ಶಾಸ್ತ್ರಮೆಂಬ ಪೊನ್ಗೆ ಒರೆಗಲ್ಲುಂ, ಮುಳಿಸೆಂಬ ಪಾವಿಗೆ ಗರುಡನುಂ, ಮೋಹಮೆಂಬ ಕರ್ಗಟ್ಟಿಗಾದಿತ್ಯನುಂ, ಮಂಗಳದಂಗಳಮುಂ, ಸತ್ವಕ್ಕಾಶ್ರಯಮುಂ, ತಪಕ್ಕೆ ತಾಣಮುಂ, ನೇಮಕ್ಕೆ ನೆರವುಂ, ಸತ್ಯಕ್ಕೆ ಸಂಗಾತಿಯುಮೆನಿಸಿರ್ಕುಂ. ಮತ್ತಮಾಚಾರ್ಯಾಧಿರಾಜ್ಯಸೂಚಕಮಾದ ಪೊನ್ನಕಿರೀಟಮಂ ಪೋಲ್ವ ಪೀತಾಂಬರೋಷ್ಣೀಷಮುಂ, ಮಾನಸಪೂಜಾಸಮಯದೊಳ್ ಭಾವಿಸಿದಾತ್ರಿವಿಕ್ರಮನ ಪಾದದುಂಗುಟದತ್ತಣಿಂ ಮುಡಿವಣಿಯ ಮೇಲೆ ಬಿಟ್ಟ ಗಂಗೆ ಯಿರ್ಪೊನಲ್ಗೊಂಡು ಪರಿವಂತೆ ತೋರ್ಪ ವಿಮಲೋರ್ಧ್ವಪುಂಡ್ರಮುಂ, ಕರುಣಾರಸದ ಕೆಱೆಗಳೆನಿಪ ಕಣ್ಗಳುಂ, ಅವಱ ಕರ್ಮಣಿಗಟ್ಟೆಗಳಂ ಪೋಲ್ವ ಪುರ್ಬುಗಳುಂ, ನಾಲ್ಮಡಿಸಿದಷ್ಟಾಕ್ಷರವರ್ಣಂಗಳಂ ಪೋಲ್ವ ಬೆಳ್ವಲ್ಗಳ ಬೆಳಕಿನಿಂ ಬಳೆದ ಸಸುನಗೆಯುಂ, ಶಿಷ್ಯರೆರ್ದೆಯೊಳ್ ಬಿತ್ತಲ್ಕೆಂದು ಸಂಗ್ರಹಿಸಿದ ಸತ್ವಗುಣದ ಬಿತ್ತುಗಳಂತಿರ್ಪ ಮುತ್ತಿನ ಕಂಠಸರಂಗಳುಂ, ದುಗಲಂಗಳುಮಾದ ದಿವ್ಯಾಕೃತಿಯಿಂ ಸಿಟ್ಟೆ

ಸುವಿನಂ ತವಮಂ ತಟ್ಟುಗುತ್ತಿದೆ, ಸತ್ವಂ ಬಿತ್ತರಿಸುತ್ತಿದೆ ಎಂದು ಅಚ್ಚರಿಗೊಳುತ್ತೆ ಭಕ್ತಿವಿನಯಂಗಳೊಡಗೂಡಿ ಪತ್ತೆಸಾರ್ದು ಸಾಷ್ಟಾಂಗಪ್ರಣಾಮಂಗೆಯ್ದು ಕೆಲದೊಳ್ನಿಂದು ಬಿನ್ನವಿಸಿದರ್:--''ಸ್ವಾಮೀ,ದೇವರಂ ಬರವೇಟ್ಟು ಆಳ್ದವರಾಣತಿಗೆಯ್ದೆಮ್ಮಂ ಕಳುಪಿದರ್;'' ಎಂಬುದುಂ

ಅಳಹಿಯಸಿಂಗರಾರ್ಯರ್ ತವಕದಿಂದೆಟ್ಟು ಶಿಷ್ಯವರ್ಗಸು ಸಿರಿವಾಳಿಗೆನಾಗಿಲಂ ಪೊಱಮಟ್ಟಂದಳವನೇಱ ಅರಮನೆಗೆಯ್ದಿ ಮುದದಿಂ ರಾಯನ ಸಮುಖಮಂ ಸಾರ್ದನಂ ;

ರಾಯಂ ಸಾಜದಿಂ ನಿರ್ಮಲಮಾಗಿ ನೇಹದಿಂ ಕರಗಿ ಕವಿವ ದಿಟ್ಟಿಗಳಿಂದೀಯಳಹಿಯ ಸಿಂಗರಾರ್ಯರಂ ದಯಾರಸದಿಂದಭಿಷೇಕಂಗೆಯ್ವಂತೆಯುಂ, ಸಂತಸಮನೊಡಲೊಳ್ ತುಂಬುವಂತೆಯುಂ, ತಣ್ಪುಗೊಳಿಪಂತೆಯುಂ, ಪೆಂಪುವಡಿಪಂತೆಯುಂ ನಿಟ್ಟಿಸಿ ಸನಿಯಕ್ಕೆ ಬರಿಸುವುದುಂ ;

ಅವರ್ : —'' ಎಲೆ ಮಾರಾಯ, ನಿನಗೆ ಧನಕನಕವಸ್ತುವಾಹನಾದಿ ಸಮೃದ್ಧಿಯುಂ ಕಳತ್ರಮಿತ್ರಬಂಧುಸಮೃದ್ಧಿಯುಂ ಆಯುರಾರೋಗ್ಯಮುಮುಂಟಾಗಿರ್ಪುದಱಂ ತಾಂ ಪರಸತಕ್ಕುದನಿತುಂ ಸಮೃದ್ಧಿಯಾಗಿರ್ಪುದು. ಆದೊಡಂ ನಿನ್ನಂತೆ ರೂಪಮುಂ ಗುಣಮುಮುಳ್ಳ ಕುಮಾರನಂ ಪಡೆದು ಜಗಮಂ ಸನಾಥಮೆನಿಸುವುದು.'' ಎಂಬುದುಂ ;

ರಾಯಂ ಅಲರ್ದ ಮೊಗಮುಂ ನಗೆವೊಳೆವ ಬಾಯ್ದೆಱೆಯುಮಾಗಿ ಪರಕೆಯನೊಪ್ಪುಗೊಂಡು ಅವರಂ ಗದ್ದುಗೆಯೊತ್ತಿನೊಳ್ ಕುಳ್ಳಿರಿಸಿ ನಿರವಿಸಿದಂ :— '' ಅಯ್ಯಾ, ನೀವೆಸಗಿದ ಪರಕೆಗಳುಂ ತಿರುನಾರಾಯಣಸ್ವಾಮಿಯವರಾಣತಿಯುಮೊಂದೆ ತೆಱತೊಳಿರ್ಪುದು'' ಎಂದು ಸನ್ನಿಧಿಯೊಳ್ ನಡೆದ ವೃತ್ತಾಂತಮನಿತುಮಂ ಬಿತ್ತರಮಾಗಿ ಪೇಟ್ದುದುಂ ;

ಇವರ್ ಅಮೃತಾಸ್ವಾದನಗೆಯ್ದಂತೆ ಸಂತಸದೊಳ್ ಕಱಕನಾಲಿ ನೀರುಂ ಕವಿವ ನವಿರುಮಾಗಿ ನುಡಿದರ್ : —'' ಅಕಟಕಟ ! ಈಯೆಮ್ಮ ಮಹೀಶೂರರಸುಗಳೊಳೀಸಿರಿಯರಸಂಗೆ ಎನಿತಭಿಮಾನಮೋ ! ಎನಿತು

ಪಕ್ಷಪಾತಮೋ ! ಎನಿತು ಬಹುಮಾನಮೋ ! ಎನಿತು ಮಱುಕಮೋ ! ಎನಿತು ಮನ್ನಣೆಯೋ ! ಊರೊಳಂ ಮನೆಯೊಳಂ ಎರ್ದೆಯೊಳಂ ನೆಲೆಗೊಂಡು ಭಕ್ತರ ಮುಖದೊಳಂ ಅರ್ಚಕರ ಮುಖದೊಳಂ ಮಾತನಾಡಿಸಿ ಮನ್ನಿಸಿ ವರಂಗಳನಿತ್ತು ತಣಿಯದೆ ಸಾಕಾರಮಾಗಿ ನಿಮ್ಮೆರ್ದೆಯೊಳ್ ನಿಂದು ಔರಸಪುತ್ರನಾಗಿ ಪುಟ್ಟುವನೆಂದು ಪೂಣ್ದಂ. ಪ್ರಜೆಯನಿತುಂ ಕಲಿದೋಷದೂಷಿತಮಾಗಿ ತಂತಮ್ಮ ವರ್ಣಧರ್ಮಂಗಳನಾಚರಿಸದೆ ತಮ್ಮ ಇಚ್ಛೆವಂದಂತೆ ನಡೆಯುತ್ತಿರೆ ಕಂಡು ಮಱುಗಿ ಇವರೊಳ್ ಪೇಳ್ದಂತೆ ಕೇಳ್ವರನನುಗ್ರಹಿಸಿ ಕೇಳದ ದುರಾಗ್ರಹಿಗಳಂ ನಿಗ್ರಹಿಸಿ ಮೋಕ್ಷಧರ್ಮಮುಂ ನೆಲೆಗೊಳಿಸಲ್ಕವತರಿಸುವಂ. ಕೃಷ್ಣಾವತಾರದೊಳ್ ಸಾಂದೀಪಂಗೆ ಬಂದ ಮೈಮೆ ಈಯವತಾರದೊಳೆನಗಂ ಬಂದಪುದು. ಈಯರ್ಥದೊಳಾಂ ಕಂಡುದೊಂದು ಕನಸಂ ಪೇೞ್ವೆಂ ಆಲಿಪುದು. ನೀಮುಮಾನುಮೆರ್ವರುಂ ತಿರುನಾರಾಯಣನ ಸನ್ನಿಧಿಯೊಳ್ ನಿಂದು ಸೇವೆಗೆಯ್ಯುತ್ತಿರ್ಪಿನಂ, ತನ್ನ ದಿವ್ಯಾಂಗದತ್ತಣಿಂ ತನ್ನ ಪಡಿನೆೞಲೆನಿಸಿದ ಚೆಲ್ವರಾಯನಂ ಪೋಲ್ವ ಅದೊಂದು ಮಗುವಂ ತೆಗೆದು ಎನ್ನ ಕೆಯ್ಯೊಳೀವುದುಂ ; ಆನುಂ ನಿಮಗಿತ್ತೆಂ. ಆನಿತಱೊಳ್ ಅಪರರಾತ್ರಿಯೊಳೇೞ್ವ ಮಕ್ಕಳ ನಿಗಮಧ್ವನಿಯಿಂದೆಚ್ಚತ್ತು ಕಣ್ದೆಱೆದು ಅಚ್ಚರಿವಟ್ಟೆಂ. ” ಎಂಬುದುಂ ;

ರಾಯನುಮಱ್ತಿಯಿಂ ಕೆಯ್ಮುಗಿದು — “ ಮುಂ ಸ್ವಾಮಿ ತಾನೆ ಬಂದೆನ್ನೆರ್ದೆಯೊಳ್ ನಿಂದುದಱಿಂ ಸ್ವತಂತ್ರನಪ್ಪೆನೆಂಬ ಸಂದೆಯಂ ಸಮನಿಸಿರ್ದುದು. ಈಗಳ್ ವೇದಾಂತವಿತ್ತುಗಳಾದ ನಿಮ್ಮ ಕೈವೊಕ್ಕು ಎನ್ನ ಕೆಯ್ಗೆ ವಂದುದಱಿಂದೆನಗೆ ವಿಧೇಯನಾಗಿರ್ಪಂ. ಭಗವತ್ಪ್ರಸಾದಮುಂ ಭಾಗವತಪ್ರಸಾದಮೂಲಕಮಾಗಿ ಬಂದೊಡೆ ನಿರುಪಾಧಿಕಮಕ್ಕುಂ. ” ಎಂದು ಪೆರ್ಚಳಿಸುತ್ತೆ, ತಾಂ ಪೊದೆದಿರ್ದ ಪೊಂದುಗುಲಮನಿವರ್ಗೆ ಪೊದಿಸಿ ತೊಟ್ಟಿರ್ದ ರನ್ನದೊಡವುಗಳಂ ತುಡಿಸಿ, ಮುದದಿಂದಿವರಿತ್ತ ಫಲಕೆಗೆ ಹರಿಸಂದಳೆದು, ನಿತ್ಯನಿಯಮಮಾದ ಗೀತಾಧ್ಯಾಯಾರ್ಥಮ

ನಿವರಿಂ ಭಕ್ತಿಯುಕ್ತನಾಗಿ ಚಿತ್ತದೊಳ್ ನೆಲೆಗೊಳಿಸಿ, ದೇವಪೂಜೆಯಂ ರಚಿಸಿ, ತೀರ್ಥಮಂ ಸ್ವೀಕರಿಸಿ, ಆಬಟೀಕ್ಕಿವರಂ ಶ್ರೀಮಂದಿರಕ್ಕೆ ಕಳುಪಿ, ತಾನುಮಂತಃಪುರಮನೆಯ್ದಿ, ಅಮೃತಾನ್ನಮನಾಸ್ವಾದಿಸಿ, ನಲವಿಂ ರಾಣಿಗೆ ಅಳಹಿಯ ಸಿಂಗರಾರ್ಯರ್ಕಂಡ ಕನಸಿನ ವೃತ್ತಾಂತಮಂ ತಿಳುಪಿ ಸಂತಸಮಂ ಪಚರ್ಗೊಟ್ಟು, ಬಟೀಕ್ಕೆ ಪೊಱಗಣ್ಗೆ ವಂದು ಅಳಹಿಯ ಸಿಂಗರಾರ್ಯರಂ ಬರಿಸಿ ಶ್ರೀರಾಮಾಯಣಭಾರತಾದೀತಿಹಾಸಪುರಾಣ ರಹಸ್ಯಾರ್ಥಂಗಳಂ ಕೇಳ್ದು, ಮತ್ತಮಾಸ್ವಪ್ನವೃತ್ತಾಂತಮನೆ ಪೇೞ್ವಿನಂ; ಇದರ್ಕಿವರ್ "ಮುಂ ತಾನೆ ಪ್ರಸನ್ನನಾದುದಱಿಂದೀಯವತಾರದೊಳ್ ದುಷ್ಟನಿಗ್ರಹಶಿಷ್ಟಪರಿಪಾಲನಂಗೆಯ್ವನೆಂದು ನಿಶ್ಚಯಿಸಿದೆಂ. ಮತ್ತಮೀಗ ಳಾರ್ಯಮುಖದೊಳ್ ಪ್ರಸನ್ನನಾದುದಱಿಂ ಮೋಕ್ಷಧರ್ಮಮಂ ನೆಲೆ ಗೊಳಿಸುವುದರ್ಕೆ ಸಂದೆಯಮಿಲ್ಲಂ" ಇವು ಮುಂತಾದ ಸಂತಸವಾತುಗ ಳಿಂದೀರ್ವರುಮನ್ಯೋನ್ಯಾಲಾಪಮನೆಸಗುತ್ತೆ ಪಲವುಂ ಪೊೞ್ತುಗಳೆದು-- ನಾಳೆ ಪೊೞ್ತಱಿ ಪಟ್ಟಣಕ್ಕೆ ಪಯಣಮೆಂದು ದಳವಾಯಿಗೆ ತಿಳುಪಿ, ಸೇನಾಪ್ರಯಾಣಸಂಜ್ಞಾಪಟಹನಾದನಮನಾಜ್ಞಾಪಿಸಿ, ತಾಮುಂ ಸಾ ಯಂಸಂಧ್ಯಾವಂದನಾದಿ ರಾತ್ರಿಕರ್ಮಂಗಳಂ ನಿರ್ವರ್ತಿಸಿ, ರಾತ್ರಿಯಂ ಸುಖದೊಳ್ ಕಳೆದು, ಉದಯಕಾಲದೊಳ್ ಮಂಗಳಪಾಠಕರ ವೇಣು ವೀಣಾಮಿಶ್ರಿತಮಾದ ಉಪ್ಪವಡದ ಬಣ್ಣನಾಡುಗಳನಾಲಿಸುತ್ತೆೞ್ಚತ್ತು ನಿತ್ಯಕರ್ಮಂಗಳನಾಚರಿಸುವನ್ನಂ; ಪಯಣಸನ್ನದಮಾಗಿ ಬಂದ ಅಳಹಿಯ ಸಿಂಗರಾರ್ಯರಂ ಸನಿಯಕ್ಕೆ ಬರಿಸಿ, ನುಡಿದಂ — "ಶುಭಕಾಲದೊಳ್ ಸಂತಸದ ಮೇಲೆ ಸಂತಸಮಪ್ಪುದೆಂಬ ಲೋಕವಾರ್ತೆ ನಿಶ್ಚಿತಮಾದುದು. ಇಂದಿನಿರುಳ್ ಕನಸಿನೊಳಾಂ ತಿರುನಾರಾಯಣನಡಿಗೆಱಗಿ ಕೆಯ್ಮುಗಿದು ನಿಲ್ವಿನಂ—'ಎಲೆ ಅರಸ, ನಿನಗಿನ್ನೊಂದು ವರಮನೀವೆಂ; ನಿನಗಭೀಷ್ಟಮಂ ಪೇೞ್ವುದು.' ಎಂದಾಣತಿಯೀವುದುಂ; ಆನುಂ ವಿನಯಾವನತನಾಗಿ ತನ್ನ ಕೆಳೆಯಳಹಿಯ ಸಿಂಗರಾರ್ಯಂಗೊಳ್ಳೆವರನಿತ್ತು ಮನ್ನಿಪುದೆಂದು

ಬಿನ್ನತಿಗೆಯ್ದಂ. ಅದರ್ಕೆ ನಸುನಗುತೆ—' ಎಲೆ ಅರಸ, ಕೇಳಾನವತರಿಸಿ ದೊಡೆನ್ನಂ ಬಟಿಸಲಲ್ಕೆನ್ನೊಡನಾಡಿ—ಈಸನ್ನೆಯುಂ ನಿನ್ನ ಮನದೊಳ್ ತಿಳಿದಿರ್ಪುದು.' ಎಂದು ತನ್ನ ಸಿರಿನಾಯ್ದೆ ಜಟದು ನಿರವಿಸಿದಂ.'' ಎಂದು ಪೇಟ್ದು ರಾಯನೊಡನಿವನುಂ—'' ಆದೊಡಾಲಿಪುದು ಮಹಾರಾಜ. ನೀಂ ಇನ್ನೆವರಂ ನರಪತಿಯಾಗಿರ್ದುದಱಂ ನಿನ್ನಪರಶರೀರಮೆನಿಸಿದೆನಗೆ ನರರನಿಬರುಂ ವಿಧೇಯರಾಗಿರ್ಪರ್. ಈಗಳೀನಾರಾಯಣಂ ನಿನ್ನ ದೇವ ರಾಜವೆಸರನನ್ವರ್ಥಂಗೆಯ್ದು ತಾನೇ ನಿನ್ನ ಕುವರನಪ್ಪುದಱಂದವನ ಪರಿ ಜನಮೆನ್ನಂ ಬಟಿಸಲ್ವುದಚ್ಚರಿಯಲ್ತು.'' ಎಂದು ಬಿನ್ನವಿಸಿದಂ.

ಅನಿತಱೊಳ್ ಮೌಹೂರ್ತಿಕರ್ ಪ್ರಯಾಣಮುಹೂರ್ತಮೆಂಬು ದುಂ, ರಾಯನುಂ ಯಾತ್ರಾದಾನಾದಿಗಳನಿತ್ತು ಸಕಲಬಲಂಬೆರಸು ಪಯಣಗತಿಯೊಳ್ ಶ್ರೀರಂಗಪಟ್ಟಣಮಂ ಸಾರ್ದು, ಅಲ್ಲಿ ರಾಜಧಾನಿ ಯೊಳರಸುಗೆಯ್ಯುತ್ತೆ ಸುಖದೊಳಿರ್ದಂ.

—ಚಿಕದೇವರಾಯನ ಜನನ—

ಶ್ರೀಮನ್ನಾರಾಯಣನ ಪರಿಪೂರ್ಣಕೃಪೆಯಂ ಪಡೆದು, ದೊಡ ದೇವಮಹಾರಾಯಂ ಶ್ರೀರಂಗಪಟ್ಟಣರಾಜಧಾನಿಯೊಳ್ ರತ್ನಸಿಂಹಾಸ ನಾರೂಢನಾಗಿ ಸಾಮ್ರಾಜ್ಯಂಗೆಯ್ಯುತ್ತಿರೆ ;

ಪ್ರಜೆಗಳ್ ವೀರರೆನಿಸಿಯುಂ ವಿನಯವಂತರುಂ। ನಲ್ವಾತುಗರಾಗಿ ಯುಂ ನನ್ನಿಗರುಂ। ಚೆಲ್ವರಾಗಿಯುಂ ಪರದಾರವಿಮುಖರುಂ। ತಿರು ಕುಳಿಗಳ ಬರವಂ ಬಯಸಿಯುಂ ಪೆಱರಂ ಬಯಸದರುಂ। ಬಯಸಿದೊಡ ವೆಗಳಂ ಪುರುಳಂ ಪಡೆದುಂ ಧರ್ಮಪರರುಂ। ಅಳವಿಗರಾಗಿಯುಂ ಪಾಪ ಭೀರುಗಳೆನಿಸಿರ್ಪರ್. ಮತ್ತಮೆಲ್ಲರೊಳಂ ಬಲ್ಲರೆನಿಸಿ ಎಲ್ಲಾನಾಡೊಳಂ ಪೊಗಟ್ತೆವಡೆದು ಮೆಲ್ನುಡಿಗರ್ ಆಱುವರ್ ಆರ್ಪರ್ ಒಳ್ಪುಡೆದೊಡವು ಗರ್ ಓಜಗಾಱರಕ್ಕರಿಗರೋದುಗಾರರ್ ಸಂಗೀತಸಾಹಿತ್ಯನಿಪುಣರ್ ಭಾರತರಾಮಾಯಣ ಭಾಗವತ ವಿಷ್ಣುಪುರಾಣಾದಿ ಶ್ರವಣಪರರಾಗಿರ್ಪರ್,

ಮತ್ತಂ ಬಿಲ್ಗಳಂತೆ ಕೋಟಿಸಾರರುಂ। ಸರಲ್ಗಳಂತೆ ಲಕ್ಷದಾನಾಸಕ್ತರುಂ। ವೈನಾಕದಂತೆ ಪಕ್ಷಪಾತವರಿದರುಂ। ಧರ್ಮಶಾಸ್ತ್ರದಂತೆ ದೇಗುಲಂಗಳಂ ಪರಿಕಾಲ್ಗಳಂ ಕೆಱೆಗಳಂ ಕಟ್ಟೆಗಳಂ ಕೊಳಂಗಳಂ ಬಾವಿಗಳನಾರವೆಗಳನಱವಟ್ಟಿಗೆಗಳಂ ನೆಗಟ್ಚುವರುಂ। ತೆಂಗಾಳಿಯಂತಾವಗಂ ದಾಕ್ಷಿಣ್ಯಶಾಲಿಗಳುಂ। ಪಗಲಂತೆ ಮಿತ್ರಾನುವರ್ತಿಗಳುಮಾಗಿರ್ಪರ್. ಮತ್ತಂ ದೀಪದೊಳ್ ಸ್ನೇಹಹಾನಿಯುಂ। ಜಕ್ಕವಕ್ಕಿಯೊಳಗಲ್ಕೆಯುಂ। ರನ್ನದೊಳ್ ಪರೀಕ್ಷೆಯುಂ। ನೈದಿಲೊಳ್ ಮಿತ್ರದ್ವೇಷಮುಂ। ತಾವರೆಯೊಳ್ ರಾಜದ್ವೇಷಮುಂ। ಅಸಿಯೊಳ್ ಕೋಶಾಸಕ್ತಿಯುಂ। ಕೈಪಿಡಿಯೊಳ್ ಕರೆಯುಂ। ಅಲರೊಳ್ ಕಟ್ಟುಂ। ನಾರ್ಧಿಕದೊಳ್ ದಂಡಗ್ರಹಣಮುಂ। ಗಾರುಡದೊಳ್ ದ್ವಿಜಸಿಗ್ರಹಣಮುಮಲ್ಲದೆ ಇವರೊಳ್ ತೋಱದು. ಇಂತು ಧರ್ಮದೊಳ್ ಪ್ರಜಾಪರಿಪಾಲನಂಗೆಯ್ಯುತ್ತುಂ ತನ್ನ ಪ್ರಜೆಯೆನಿಸಲೆಳಸಿದ ತಿರುನಾರಾಯಣನ ಕಲ್ಯಾಣಗುಣಂಗಳನೆಣಿಸುತ್ತಿರೆ ;

— ಅಮೃತಾಂಬೆಯ ದೌಹೃದದ ವರ್ಣನೆ —

ಕಿಱಿದುಂ ದಿನದೊಳರಸಿ ಸತ್ಕರ್ಮಮಂ ಗರ್ಭದೊಳ್ ಪೊತ್ತ ಶ್ರುತಿಯಂತೆಯುಂ, ಜಸಮಂ ಪೊತ್ತ ರಾಜನೀತಿಯಂತೆಯುಂ, ಬಿನಯಮಂ ಪೊತ್ತ ಬಿಜ್ಜೆಯಂತೆಯುಂ, ನೇಸಱಂ ಪೊತ್ತ ಮುಂಬಗಲಂತೆಯುಂ, ತುಂಬುವೆಱೆಯಂ ಪೊತ್ತ ಪುಣ್ಣಿಮೆಯ ಸಂಜೆಯಂತೆಯುಂ ಪೊಡೆಯೊಳ್ ಶ್ರೀಮನ್ನಾರಾಯಣನಂ ಪೊತ್ತು ಪೊಗರೇಱಿದಳ್. ಕಿಱಿದಾದೊಡಂ ಪೆಱಪೊಱೆಯಂ ಪೊಱಲರಿಯದ ಬಳ್ಳಿ ತನ್ನ ಪೆರ್ಗಾಯಂ ಪೊಱುವಂತೆ ರನ್ನದೊಡವುಗಳಂ ಪೊಱಲರಿಯದಿರ್ದುಂ ಜಗದ್ಗುರುವನುದರದೊಳ್ ಪೊತ್ತಿರ್ಪಳ್. ದಿನದಿನದೊಳ್ ಬಳೆವ ಗರ್ಭಭರದಿಂ ಮುನ್ನೀರ ನೀರುಂಡ ಮುಗಿಲಂತೆ ಮೆಲ್ಲಮೆಲ್ಲನೆ ನಡೆಯುತ್ತೆ ಬೞಿವರುವರಸಂಚೆಗಳ ಬಿಡಯುಮಂ ಬಿಡಿಸುವಳ್. ಒಳಗಿರ್ಪ ನಾರಾಯಣನ

ಸಿರಿಗಯ್ಯ ಶಂಕಿನ ಬೆಳ್ಗದಿರ್ ಪೊಱಪೊಣ್ಮಿದುದೋ, ಬಗೆಯೊಳ್ ಪುಟ್ಟಿದ ಚಂದಿರನ ದೀಪ್ತಿ ವ್ಯಾಪ್ತಮಾದುದೋ, ಪಾಸಿನ ಪಾವೆಱೆಯನ ಕಾಂತಿ ಕರೆಗಣ್ಮಿದುದೋ, ಪಾಲ್ಗಡಲ ತೆರೆ ಪಸರಿದುದೋ, ಸತ್ವಗುಣಂ ಬಿತ್ತರಮಾದುದೋ ಎನೆ-ಮೆಯ್ಯೊಳ್ ಬೆಳ್ಗದಿರ್ವಡೆದಳ್. ಮತ್ತಮುದರದೊಳಿರ್ಪ ಸಿಸುವಿನ ಮ್ಮೈಮೆಗನುಗುಣವಾಗಿ ಬಯಸುವಳ್. ಎಲೆ ಕೆಳದಿ, ಮುತ್ತುಗಳೆನಿತಂ ಪೊತ್ತೊಡಂ ತಣ್ಪುದೋಱದು, ಕೊಳುಗುಳದೊಳ್ ಕಡಿವಡೆದ ಪಗೆರಾಯರ ಪಟ್ಟದಾನೆಯ ಕುಂಭದಿಂದುದಿರ್ವ ಪೆರ್ಮುತ್ತುಗಳಿಂ ಕೋದ ತಾರಹಾರಂಗಳಂ ತಂದು ಧರಿಸೆಂಬಳ್. ಪತ್ತಿಸಾರ್ದು ಊಱುಗಂಗೆಯ್ವ ಪೆಱನಾಡ ರಾಣಿಯರ ಕೆಯ್ಯ ಕೈಪಿಡಿಯಂ ಕಡೆಗಣಿಸಿ ಅವರ ಪೊಳಪುವೆತ್ತ ಕದಂಪಿನೊಳ್ ತನ್ನ ಮೊಗಸಿರಿಯಂ ನಿಟ್ಟಿಸುವಳ್. ಪಂಜರದ ಗಿಳಿವಱಿಗೊಂದೆರಡ್ದಾಳಿಂಬದ ಬಿತ್ತನಿಕ್ಕುತಬಿಲ್ದಂ ಸಕಲ ಜನಕ್ಕಮಭೀಷ್ಟಫಲಂಗಳಂ ಕುಡಲೆಳಸುವಳ್. ಅಲರ್ವಾಸಿನೊಳೂಱಿದೊಡಂ ಕಂದುವ ಚೆನ್ನಡಿಗಳಿಂ ಪಗೆರಾಯರ ಪಟ್ಟದರಸಿಯರ ಬೈತಲೆವಣಿಗಳಂ ಮೆಟ್ಟಲೆಳಸುವಳ್. ಪರಿಜನದೊಳ್ ನೆವಮಿಲ್ಲದೆ ದಯೆಗೆಯ್ವಳ್, ಎನಿತಾನುಂ ತಪ್ಪಂ ಸೈರಿಪಳ್. ಜಗಮನಿತುಮುಜ್ಜೀವಿಪ ಕಜ್ಜಂಗಳಂ ನಿರವಿಪಳ್. ಇಂತು ದೌಹೃದಮಂ ಪರಿಪಾಲಿಸುತ್ತೆ ನವ ಮಾಸಂಗಳಂ ಕಳೆದು, ಜನನಮಾಗಲಾಗಳೆಂದಿರ್ಪಿನಂ ;

ಅರಸಿ ರಾಯನ ಪದಸರಸಿಜಂಗಳಂ ನಿಟ್ಟಿಸಲೆಳಸಿ ಕರೆಯಿಸೆ ವಂದ ರಾಯನುಂ ತನಗಿದಿರೇೞ್ವುದಂ ಮಾಣಿಸಿ ತಾನುಮಾಮೆಲ್ವಾಸಿನೊಳ್ ಕುಳ್ಳಿರ್ದು ನುಡಿದಂ:— "ಎಲೆ ಅರಸಿ ! ನಿನ್ನ ಮೊಗಸಿರಿ ಬೆಳ್ಪೇಱಿದನ್ನಂ ಪಗೆರಾಣಿಯರ ಮೋರೆಗಳ್ ಕರ್ಪೇಱಿದುವು. ನಿನ್ನ ಸುಯ್ಯೆಲರಿನಿಸುಂ ಪಿರಿದಪ್ಪನ್ನಂ ಅವರ ಸುಯ್ಯೆಲರೆಡೆವರಿದುದು. ಪಲವುಂ ಜೋಯಿಸರುಮೊಂದುವೆರಸಿ ಬಂದು—ನಿನ್ನ ಗರ್ಭದೊಳೊಗೆದ ಸಿಸು ಕೆಱದುಂ ದಿವಸದೊಳೇೞ್ಗವಡೆದು ಪೊಡವಿಯ ಪೊಲ್ಲದರೆಲ್ಲರಂ ಪೊಯ್ವು

ಕೆಡಪಿ ತಕ್ಕರಂ ಪೆರ್ಕಳಂಗೊಳಿಸಿ ನೂಱುಂಬರಿಸಂ ಸೊಗನಾಳ್ಗೆಮೆಂದು ಪೇೞ್ವಿರ್ "—ಎಂದಿನಿತುಂ ಸಂತಸವಾತುಗಳಂ ನುಡಿಯುತ್ತಿರೆ ;

ಪಡಿಯಱವೆಣ್ಣೊರ್ವಳ್ ಪಡಗರದೊಳ್ ಬಂದು ತನ್ನ ಕೆಯ್ಯ ಪೊಂಬೆತ್ತದಿಂ ನೆಲಗಟ್ಟಿನ ಪಳಿಕಿನಱಿಯನೊಯ್ಯನೆ ಪೊಯ್ದು ದನಿಗೆಯ್ದೆಱಗಿ ಕೆಯ್ಮುಗಿದು ಪೆಂಪೇಱಿದ ಮೊಗಸಿರಿಯುಂ ನಿಡು ಗಣ್ಣುಮಾದ ಸಂತಸಗದುಬಿನೊಳ್—"ಜೀಯ ! ಪರಾಕು, ಚಿತ್ತವಿ ಸುವುದು ಪಿರಿಯೊಸಗೆಯೊಸಗೆ ! " ಎನೆ; ರಾಯನುಂ-" ಎಲೆ ಪೆಣ್ಣೆ, ಕದ ಲದೆ ಬಿನ್ನವಿಸು ಇದಱ ಬಿತ್ತರಮಂ "—ಎಂಬುದುಮವಳುಂ—" ದೇವ, ಚಿತ್ತವಿಪುದು. ದೇವರ ಕೆಳೆಯಳಹಿಯ ಸಿಂಗರಾರ್ಯರ ಧರ್ಮಪತ್ನಿ ಸಿಂಗ ಮ್ಮಂಗೆ ಸುಮುಹೂರ್ತದೊಳ್ ಗಂಡುಗುವರನಾದಂ" ಎಂದು ಬಿನ್ನವಿಸಿದಳ್.

ಅದರ್ಕೆ ರಾಯನುಂ ರಾಣಿಯುಮತಿಹರ್ಷಿತರಾಗಿ ತಾಂ ತೊಟ್ಟ ತೊಡವುಗಳಮವಳ್ಗಿತ್ತು, ಮೇಲೆ ಬರ್ಪ ರಾಜಕುಮಾರಸೂರ್ಯೋ ದಯಕ್ಕೆ ಇದರುಣೋದಯಮೆಂದು ನಿರವಿಸಿ, ರಾಯನುಮೀಯುತ್ಸವಮಂ ಪರಿಪಾಲಿಸಲ್ಕೆಂದು ಪೊಱಗಣ್ಗೆ ವಂದಳಹಿಯಸಿಂಗರಾರ್ಯರಂ ಕರೆಯಿಸಿ ಸಂತಸಮಿರ್ವರ್ಗಂ ಸಮಾನಮಾಗಿರ್ಪುದಱಿಂದೋರೊರ್ವರ್ಗೋರೊರ್ವ ರೊಸಗೆವೇೞ್ದು ಪಲವುಂ ಪೊೞ್ತುಷ್ಟಾಲಾಪದೊಳಿರ್ಪಿನಂ ;

—ಕುಮಾರೋದಯ ಮತ್ತು ಪುತ್ರಜನ್ಮಮಹೋತ್ಸವ ವರ್ಣನೆ—

ದಾನಕ್ಕಮುತ್ಸವಕ್ಕಂ ಪೊನ್ನುಡೆತೊಡವುಗಳನಿತ್ತು ಅಳಹಿಯ ಸಿಂಗರಾರ್ಯರಂ ಕಳುಪಿ, ರಾಯನುಮಂತಃಪುರಕ್ಕೆ ಪೋಪನೆಂದೆಣಿಸುವನಿತ ಱೊಳೆ ಮುಂ ತಾಂ ಕಳುಪಿದ ಒಳಲೂಟಿಗದ ಕುವರನೊರ್ವನೆ ಯ್ತಂದು ಕೆಯ್ಮುಗಿದು ಕೆಲದೊಳ್ ನಿಂದು ರಾಯನಿರವನಾರಯ್ದು, ಮೊಗಸಿರಿಯಿಂದನುಮತಿಯನೂಹಿಸಿ ಪತ್ತಿಸಾರ್ದು ವಿನಯದಿಂ ಬಿನ್ನ ವಿಸಿದಂ :— " ರಾಯ, ಚಿತ್ತವಿಪುದು. ಅಂತಃಪುರದೊಳ್ ಬರ್ದೆ

ಯರುಂ ದಾದಿಯರುಂ ಬೀದಿವನೆಯಿಂ ಬಂದ ಐದೆಯರ್ಕಳ ವಾಗಿ ಪಿರಿದುಂ ಕಿಱಿದುಮಲ್ಲದೊಂದು ನಲ್ವಗೆಯೊಳ್ ಬಳಸಿದ ಭಿತ್ತಿಗಳ್ಗೆ ನವಸುಧಾಲೇಪಮುಂ, ಮೇಗಣ್ಗೆ ಬೆಳ್ವಟ್ಟೆಯ ಮೇಲ್ಕಟ್ಟುಂ ಮುತ್ತಿನ ಸರದ ಲಂಬಣಮುಂ, ನೆಲಕ್ಕೆ ತಾವರೆಯಂಚೆ ಗಿಳಿ ಸತ್ತಿಗೆ ಸೀಗುರಿ ಮೊದಲಾದ ಪಲವುಂ ತೆಱದ ರಂಗವಲ್ಲಿಯುಮಾಗಿ ಅಲಂಕರಿಸಿ, ಮಂಜುವೆಟ್ಟಿನ ಗವಿಯ ಪಳಿಕಿನ ಪಾಸಱೆಯನೆ ಬಿತ್ರಮಾಗಿ ಪಾಸಿದ ಮೆಲ್ವಾಸಿನೊಳ್ ಮುಂ ಕಡೆವಾಗಳ್ ಪಾಲ್ಗಡಲ ತೆರೆನೊರೆಯೊಳ್ ತೇಲ್ವ ಸಿರಿಯರಸಿಯರಂ ಪೋಲ್ವ ರಾಣಿಯಂ ಬಳಿಸಿಯುಚ್ಚರಿಸಿಯರಂತೆ ಕುಳ್ಳಿರ್ದುರ್, ಮುಂ ದಶರಥರಾಣಿ ಕೌಸಲ್ಯೆ ರಾಮಚಂದ್ರನಂ ಪಡೆವಾಗಳ್ ನಡೆಯುಂ ನುಡಿಯುಮಾಗಿಂತಿರ್ದಳ್ ; ವಸುದೇವನರಸಿ ದೇವಕಿಯುಮಿಂತಿರ್ದಳ್ ; ಮತ್ತಂ ಎಮ್ಮರಮನೆಯ ದೇವರಾಜರಸರ ಮುದುಪ ದೇವರಾಜರಸರ ರಾಣಿಯರುಮಿಂತಿರ್ದರ್—ಎಂದು ಸಂತಸನಾತುಗಳಿಂ ಪೊೞ್ತುಗಳೆಯುತಿರ್ದರ್. ಊೞಿಗವೆಣ್ಗಳುಂ ಭಯಭಕ್ತಿಗಳಿಂ ಪುಟ್ಟಿದ ತವಕದೊಳ್—'' ಎಲೆಗೆ ಬೆಳ್ಳಿಲರಂ ಬಿಳಿಯ ಸಾಸುವೆಯುಂ ಕಟಿವೆಯರಳ್ಗಳೊಳ್ ಬೆರಸಿ ಮನೆಯೊಳಮಂಗಳದೊಳಂ ಚಲ್ಲೆಂದುಂ। ಪಾವಿನ ಸೋಲೆಯುಂ ಪಸುವಿನ ತುಪ್ಪಮುಂ ಸಾಮ್ರಾಣಿಯೊಳ್ ಬೆರಸಿ ಪೊಗೆಗೊಳಿಪುದೆಂದುಂ। ಅಡಿಯುಂ ತೊಳೆದಗ್ನಿಯುಂ ಮುಟ್ಟದಲ್ಲದೀಮನೆಯುಂ ಪುಗವೇಡೆಂದುಂ। ಮಾವುಬೇವಿನೆಲೆಗಳಿಂ ಪಚ್ಚೆದೋರಣಮುಂ ದೊರೆಕೊಳಿಪುದೆಂದುಂ। ಬಾಗಿಲಿರ್ಕೆಲದ ಗೋಡೆಗಳೊಳ್ ಸಂಕುಪಾಱುಂಬಳೆಗಳಂ ಬರೆಯಿಸೆಂದುಂ। ಜೋಯಿಸರ್ ಗಳಿಗೆವಟ್ಟಲನೆಟ್ಟಱದೊಳ್ ಕಾದಿರ್ಪುದೆಂದು ಪೇೞೆಂದುಂ। ಬಣ್ಣಗೊರಲ್ಪೆದೆಯರ್ ಸೋಬನವಾಡಂ ಪಾಡುಗೆಂದುಂ। ಓದಾಳಿಗಳಿಂ ಸಾಸಿರ್ವೆಸರನೋದಿಪುದೆಂದುಂ। ಪೊಸಂತಿಲ ಪೊಱಗಣಿರ್ಕೆಲದೊಳ್ ಪಲ್ಲವದೂರ್ವಾಲಂಕೃತಮಾದ ಕುಂಭಂಗಳನಿರಿಸುವುದೆಂದುಂ। ರಕ್ಷೆಗೆಯ್ವುದರ್ಕೆ ಶ್ರೀಮನ್ನಾ

ರಾಯಣನ ಕಪ್ಪುರದ ಸಿರಿಯುಡಿವುಡಿಯುಂ ತರ್ಪುದೆಂದುಂ। ಅರಸಿಯು ಕಡುನೇಹದ ಕೆಳದಿ ರಾಯನಡಿಯೆಡೆಗೆ ಪರಿದೊಸಗೆವೇಳ್ವುದೆಂದುಂ— ನುಡಿಯುತ್ತಮುತ್ತಲುಮಿತ್ತಲುಂ ಪರಿಯುತ್ತಿರ್ದಪರ್.'' ಎಂದು ಬಿನ್ನವಿಪುದುಂ ;

ರಾಯನುಮಾಪ್ತಸಾಮಾಜಿಕರಂ ಜ್ಯೋತಿರ್ವಿದರಂ ಪುರೋಹಿತ ರುಮಂ ಬರಿಸಿ ಅವರೊಡನೆ—'' ಈವೇಳೆಯು ಪಂಚಾಂಗಶುದ್ಧಿಯಿರ ವೆಂತು ? ಲಗ್ನಮಾವುದು ? ಗ್ರಹಾನುಕೂಲ್ಯಮೇತೆಜಂ ? '' ಎಂದು ವಿಚಾರಿಸುತ್ತಿರೆ ;

ರಾಣಿಯು ಸಂಚಿಯಓಟಗದ ಕೆಳದಿಯೊರ್ವಳ್ ಸಂತಸ ದೊಳಿಯ್ತಂದು ವಂದನಂಗೆಯ್ದು ಮಹಾರಾಯಂಗೆ ಪಟ್ಟದ ಕುವರಂ ಪುಟ್ಟಿದನೆಂದು ಬಿನ್ನವಿಪ್ಪುದುಂ ;

ಈಯುಮರ್ದುನುಡಿ ರಾಯನ ಕಿವಿಯಂ ಪೊಕ್ಕು ಬಗೆಯೊಳ್ ಪಸ ರಿಸೆ ತಾಂ ದೇವನೆಂದುಂ ಮತ್ತಮಾನಾಲ್ಕೊಗನೆಂದುಂ ಎಣಿಸಿ ಪೆರ್ಕಳಂ ಗೊಂಡು ಆಭಂಡಾರದೊಳಿರ್ಪ ಪೆರ್ಬೊತ್ತದ ಪೊನ್ನ ರನ್ನದ ತೊಡವು ಗಳನಾಕೆಳದಿಗಿತ್ತು ಕಳುಪಿ ಜಾತಕದಿರವನಾರಯ್ವುದುಂ ;

ಅತಿಹರ್ಷದಿಂ ಜೋಯಿಸರ್ — '' ದೇವ, ಚಿತ್ತವಿಪುದು. ಲಗ್ನ ಹೋರಾದ್ರೇಕ್ಕಾಣಾದಿಭೇದಭಿನ್ನ ಸೂಕ್ಷ್ಮಕಾಲದ ಸ್ವರೂಪಂಗಳೊಳಿರ್ಪ ಗ್ರಹಾನುಕೂಲ್ಯಂಗಳೊಳ್ಪಮಂ ಭಾವಿಸೆ, ಸಂಹಿತಾಭೇದಂಗಳ ರಾಜ ಯೋಗಾಧ್ಯಾಯಂಗಳ ಶ್ಲೋಕಂಗಳನಿತರ್ಕಂ ಈಜಾತಕನೊಂದೆ ಉದಾ ಹರಣೆಯಾಗಿರ್ಕುಂ. ಆಮೆನಿತುಂ ಪೊಗಟ್ಬೆವು !'' ಎಂದು ಬಿನ್ನವಿಪುದುಂ;

ಆಳಹಿಯಸಿಂಗರಾರ್ಯರುಂ—'' ಈಜೋಯಿಸದಿರವಿಂತಿರ್ಕೆ ! ಸಾಹಿ ತ್ಯಪರಿಪಾಟಿಯಿಂದಾನೊಂದು ಜಾತಕಫಲಂಗಳಂ ಪೇಟ್ಟಿಂ. ಈರಾಯ ಗುವರಂ ತನ್ನ ಜಾತಕದೊಳ್ ಪಾರ್ಥಿವವರ್ಷದಿಂ ಸಕಲಪಾರ್ಥಿವೋ ತ್ತಮನುಂ, ದಕ್ಷಿಣಾಯನದಿಂ ದಕ್ಷಿಣದಿಕ್ಚಕ್ರವರ್ತಿಯುಂ, ಆಶ್ವ

ಯುಜ ಮಾಸದಿಂದಸಂಖ್ಯಾತಾಶ್ವಸೇನಾಧೀಶ್ವರನುಂ, ಶುದ್ಧಪಕ್ಷದಿಂದಂತ ರ್ಬಾಹ್ಯಪರಿಶುದ್ಧನುಂ, ವೈಷ್ಣವಭದ್ರತಿಥಿಯಿಂ ಸಕಲವೈಷ್ಣವಕುಲೋ ದ್ಧಾರಕನುಂ, ಚಂದ್ರವಾಸರದಿಂದಖಿಲಸಜ್ಜನಚಿತ್ತಾಹ್ಲಾದಕನುಮೆನಿಸು ಗುಂ. ಮತ್ತಮೀಕುವರಂ ಅಪರಿಮಿತಕನ್ಯಾದಾನಂಗೆಯ್ವುದಱಿಂ ತಾನುಂ ದಾನಮುಂ ಕೊಳಲ್ಕೆಳಸಿದಂತೆ ಸೂರ್ಯಂ ಕನ್ಯೆಗೆ ವಂದಿರ್ಕುಂ. ಮುಂ ತನ್ನ ವಂಶದ ಪುರೂರವ, ನಹುಷ ಯಯಾತಿ ರಂತಿ ಶಶಿಬಿಂದು ಮುಂತಾದವರಂತೀಗಳುಮಖಂಡಭೂಮಂಡಲಾಧಿಪತಿಯಕ್ಕುಂ, ಆದರ್ಕಾ ನೆ ಸಾಮ್ರಾಜ್ಯಪದಾಭಿಷೇಕಂಗೆಯ್ವೆನೆಂದು ಪೂಣ್ದಂತೆ ಚಂದಿರಂ ಮೆ ಯ್ಸಿರಿವಡೆದು ಕುಂಭಮುಂ ಕೊಂಡಿರ್ಕುಂ. ಮತ್ತಮಿವಂ ತಾಂ ಪಲವುಂ ಷೋಡಶಮಹಾದಾನಂಗೆಯ್ವುದಲ್ಲದೆ ತನ್ನ ಸೇರಿದ ವಿದ್ವತ್ಕವಿಗಳಿಂ ತುಲಾದಿದಾನಂಗಳಂ ಗೆಯ್ಸುವನೆಂಬುದಂ ತಿಳಿಪುವಂತೆ ಬುಧ ಕವಿಗಳ್ ಮಂಗಳಂಬೆರಸು ತುಲಾರೂಢರಾದರ್. ಈಕುವರಂ ಅರಸುಗೆಯ್ವೊಡೆಯೊ ಳಧ್ಯಯನಾಧ್ಯಾಪಕಂಗನುಟಿದು ಮಿಥುನಭಾವದೊಳಿರೆ, ಗೌರವಂ ದಕ್ಕುದೆಂದಳ್ಕಿದಂತೆ ಬೃಹಸ್ಪತಿಯುಂ ವಿಷಕರ್ಕಟಮಧ್ಯದೊಳ್ ಬೆದಱು ಗೊಂಡಿರ್ಕುಂ. ಇಂತಪ್ಪ ತೇಜಸ್ವಿ ಸುತನಾದೊಡಮಿವನ ಅರಸುಗೆಯ್ತ ದೊಳ್ ಮಂದಂಗೆ ಮಂದಾಧಿಕಾರಮಿಲ್ಲದೆ ಮುಖ್ಯಾಧಿಕಾರಮಿಲ್ಲೆಂಬುದಂ ತೋರ್ಪಂತೆ ಶನೈಶ್ಚರಂ ಮೇಷಾಧಿಷ್ಠಿತನಾದಂ. ಈದಿನದೊಳ್ ತಾವು ಸರ್ಗೆ ಹಾನಿಯೆಂಬುದಂ ಕಾಣಿಪಂತೆ ರಾಹುಕೇತುಗಳ್ ಕರ್ಕಟಮಕರ ಗ್ರಸ್ತರಾದರ್.'' —ಎಂದು ನುಡಿದ ಅಳಹಿಯಸಿಂಗರಾರ್ಯರ ಮಾತಂ ಕೇಳ್ದು ಸಂತಸಂಗೊರೆಡು ರಾಯನುಂ ಕಳುಪತಕ್ಕವರಂ ಕಳುಪಿ, ತಾನುಂ ತನ್ನೆಳಗುವರನ ಮುದ್ದುಮೊಗಮುಂ ನೋಡಿ ದಾನಂಗಳನಿತ್ತು ಪಿತೃ ಋಣಮುಂ ತೀರ್ಚುವನೆಂದು ಪುರೋಹಿತಪರಿಜನಂಬೆರಸು ಮುಂದೆ ನಡೆವ ಪಲವುಂ ಕಮ್ಮೆಣ್ಣೆಯ ಕೈದೀವಿಗೆಗಳ ಬೆಳಕಿನೊಳ್ ನಡೆದು, ಸೂತಿಕಾ ಗೃಹದ ಬಾಗಿಲ ಪೊಱಗಣ ಪೆರ್ಜಗಲಿಯೊಳ್ ರನ್ನವಣೆಯೊಳ್

ಕುಳ್ಳಿರ್ದು, ಅಲ್ಲಿ ಪೊಸಂತಿಲ ಸನಿಯದೊಳ್ ಸಾವಧಾನದೊಳ್ ಕುಳ್ಳಿರ್ದ ಪಾರ್ವತಿ ಮುತ್ತೈದೆಯೊರ್ವಳ ಉತ್ಸಂಗದೊಳ್ ತನ್ನ ಮೆಯ್ವೊಗರಿಂ ಬಳಸಿದ ದೀವಿಗೆಗುಡಿಗಳನಿಟಿಳಿಕೆಗೆಯ್ಯುತ್ತೆ, ಮೆಯ್ ಕೆಂಪಡದಿರ್ಪುದಱಿಂ ಪೊಟ್ಟೞಿ ಕೆಂಗದಿರ್ಗೊಂಡ ನೇಸಱಂತೆಯುಂ ಸಂಜೆಯೊಳ್ ಕೆಂಬೊಗರ್ವೆತ್ತುದಿಸುವ ಚಂದಿರನಂತೆಯುಂ ಮೆಲ್ಪುವಡೆದ ಕಲ್ಪದ್ರುಮದ ಚೆಂದಳಿರ್ಗೊಂಬೆಯುಂತೆಯುಂ ಆಗಳಲರ್ದ ಕೆಂದಾವರೆಯು ಬಿಂದದಂತೆಯುಂ ಪೊಣ್ಮಿದ ಪೊಡರ್ದ ಪೊಸವಗೆಯು ಲೋಹಿತಾಂಗನಂತೆಯುಂ ತೋರ್ಪ ಮೆಯ್ಯುಂ ಎಳವಿಸಿಲಿಂದೆ ಮೇಣ್ ಪವಳಗುಡಿಗಳಿಂದೆ ಅಲ್ಲದೊಡೆ ಕೆಂಬರಲ್ಗಳಿಂದಾದೊಡಂ ಸಮೆದಂತಿರ್ಪ ಕೆಯ್‌ಕಾಲ್ವೆರಲ್ಗಳುಮಾಗಿ ತನ್ನುಳ್ಳ ನಾಲ್ದೋಳ್ಗಳಂ ತೋಱದೆ ಯಶೋದೆಯುತ್ಸಂಗದೊಳ್ ಇರ್ದೋಳ್ವೆತ್ತಿರ್ದಾ ಶ್ರೀಕೃಷ್ಣನಂತೆಯುಂ ಪಲವುಂ ಮಹಾಪುರುಷಲಕ್ಷಣಂಗಳಿಂ ದೆಸೆವ ಎಳಸಿಸುವಂ ನಿಟ್ಟಿಸುವೆಡೆಯೊಳಾಡದೆಮೆಯುಮಡಿಗಡಿಗೆ ತೊಡೆದೊಡಂ ತೊರೆವ ಸೊಗದಾಲಿನೀರಿಂ ನನೆದ ನಟ್ಟಾಲಿಯುಮಾಗಿ ನೇಹರಸದಿಂ ನುಡಿಸುವಂತೆಯುಂ ತಕ್ಕವಿಸುವಂತೆಯುಂ ಈಂಟುವಂತೆಯುಂ ನಿಟ್ಟಿಸಿ ನಿಟ್ಟಿಸಿ ಸಂತಸಂಬಡೆದಂ.

ಅಳಹಿಯುಸಿಂಗರಾರ್ಯನೀರಾಯುಗುವರನ ಅಂಗಪ್ರತ್ಯಂಗಚಕ್ರವರ್ತಿಲಕ್ಷಣಂಗಳಂ ನಿರವಿಸಿ ಪೇೞ್ದಂ—"ಚಿತ್ತವಿಪುದು ಮಹಾರಾಯಂ. ಅರೆವಿರಿದ ಕೆಂದಾವರೆಯಂ ಪೋಲ್ವ ಮುದ್ದುಮೊಗದೊಳ್ ಕಱದಾಗಿ ಸಣ್ಣನೆನಿಸಿದೆವೆ ಸಾಲ್ಗೊಂಡು ಕಿವಿವರೆಗಂ ನೀಳ್ದ ಬಗಸೆಗಣ್ಗಳ್ ತಳತಳಿಸುತ್ತಿದೆ. ಕಪ್ಪುರದ ತಾವರೆಯ ಪರಿಮಳಂಗಳಂ ಬೆರಸಿದಂತೆಸೆವ ಚೆಂಬಾಯ ತನಿಗಂಪಂ ಸವಿಯಲ್ಕೆಂಬಂತೆ ನೀಳ್ದು ನಸುಬಾಗಿದ ಮೂಗು ಮಿಗೆ ಸೊಗಸುತ್ತಿದೆ. ಸರಿಗೆಯ ಪಟವಿಗೆಯ ತಾವರೆಯ ಗೆಱಗೊಂಡ ಮೆಲ್ಲಡಿಗಳೆಲ್ಲಾರಾಯರ ಮುಡಿವಣಿಗಳ ಸೋಂಕಿಂಗುಚಿತಮಾಗಿದೆ. ಮುಗಿಲ ಮೊೞಗಿನಂತೆಯುಂ ಭೇರೀನಾದದಂತೆಯುಂ ಸಿರಿದನಿ ಪೆಂಪುವಡೆದಿದೆ.

ಇದೆಲ್ಲವುಂ ಚಕ್ರವರ್ತಿಲಕ್ಷಣಂಗಳ್. ಇಂತಿರ್ಪ ಕುವರನವತಾರದೊಳ್ ದೇವರುಮಂತಃಪುರಮುಮಾಮುಂ ಊರುಗರುಂ ನಾಡುಬೀಡುಗರುಂ ಸಂತಸಂಗೊಳ್ವುದು ಸಾಜಮೈಸೆ! ಚೇತನಾಚೇತನವಿಭಾಗಮಿಲ್ಲದೆ ಸಕಲಲೋಕಸಂತಸಮಂ ನಿರವಿಪುದು ದೇವರ್. ಪಿಂತಣ ರಾಯರುಡಿಸಿದ ಜಸಮೆಂಬ ದುಗುಲಂ ಪಟಿದಾಗಿ ಮಾಸಿದುದು, ಈಗಳೀಕುವರಂ ಪೊಸಜಸದ ದುಗುಲಮನೀವನೆಂಬ ಸಂತಸದಿನೆಂಬಂತೆ ಪತ್ತುಂ ದಿಕ್ಕುಗಳುಂ ಪ್ರಸನ್ನಮಾದುವು. ಈಕುವರಂ ದಾಟಿಡುವೆಡೆಯೊಳ್ ಪಗೆರಾಯರ ಪುರಂಗಳನೆನಗಾಹುತಿಗುಡುವನೆಂಬ ನಂಬುಗೆಯಿಂದಗ್ನಿ ಬಲಮುರಿಗೊಂಡು ಪೊಗೆಗಳೆದು ತೊಳಗಿದುದು. ಸಕಲಸಜ್ಜನರ ಮನದ ಕಾಲುಷ್ಯಮಂ ಕಳೆದು ಸುಪ್ರಸನ್ನಮಾದುದನಭಿನಯಿಪಂತೆ ಪಲವುಂ ಪೊಟಿಕೊಳನೀರ್ಗಳ್ ಕದಡುಗಳೆದು ತಿಳಿದುವು. ತಮಂ ತಟ್ಗ ಸತ್ವಮೆಟ್ತರಮಾದಪುದೆಂಬುದಂ ತೋರ್ಪಂತಾಗಸದೊಳ್ ಕಟ್ತಲೆಗಳೆದು ಪೆಜಿಯುಜುಲ್ಗಳ್ ಪೆಂಪುವಡೆದುವು. ಅಸಿತುಂ ಜನಕ್ಕಮುಜಿವುರಳ್ಬಯಕೆಗಳನುಗೊಳಿಸುವುದೆಂಬುದನೆಟ್ಟಿಜಿಪಂತೆ ಸಕಲಸಸ್ಯಂಗಳುಂ ಫಲಭರಿತಂಗಳಾದುವು. ತೆಂಕಲ್ನಾಡು ತೇಜಂಬಡೆದುದಂ ತಿಳಿಪುವಂತಗ್ಗಳಿಕೆ ವೆಗ್ಗಳಮಾದುದು. ಭಗವದವತಾರಮೆಂಬುದಂ ಪ್ರಕಟಿಸುವಂತೆ ದುಷ್ಟಜನಂ ದೂಳ್ಗೊಂಡು ಶಿಷ್ಟಜನಂ ಸಿರಿವೆತ್ತುದು." ಎಂದಿಂತು ಪೊಗಟ್ದು ಪರಕೆಗೆಯ್ವುದುಂ;

ರಾಯನುಮತಿಹರ್ಷದಿಂದೆಟ್ವರೊಡನೆ ಪೊಜಗಣ್ಗೆ ವಂದಲ್ಲಿ ಸಂದೊಗದ ಬಿಜ್ಜೆವಳರ್ಗಮೂರುಗರ್ಗಂ ನಾಡುಬೀಡುಗರ್ಗಂ ಮಿಕ್ಕುದೇಂ ಪಾರ್ವರೆಂಬ ಪೆಸರುಳ್ಳೆರನಿಬರ್ಗಂ ಅವರವರಂತವರವಜಿದು ಅಗರಂಗಳಂ ಬೆಳೆಗೆಯ್ಗಳನಾರವೆಗಳಂ ಆನೆಕುದುರೆಗಳನುಡೆತೊಡವುಗಳಂ ಪೊನ್ಗಳಸಿತ್ತು ಮನ್ನಿಸಿ ತಣಿಯಿಸಿ ಕಳುಪಿ ಸುಖದಿಂ ಪುತ್ರಜನ್ಮಮಹೋತ್ಸವಮಂ ಪರಿಪಾಲಿಸುತ್ತುಮಿರೆ;

ಸೂತಕಮಂ ಕಳೆದು ಸುಮುಹೂರ್ತದೊಳ್ ನಾಮಕರಣಮಹೋ

ತ್ಸವಮನಾರಂಭಿಸಿ ಮುಂ ತನ್ನ ಮೇಲೆ ಪಿತೃಋಣಂ ಪ್ರವೃದ್ಧಮಾಗಿರ್ದು ದಱಿಂ ತತ್ತದುತ್ಸವಂಗಳೊಳಾನೆಸಗುವಾಭ್ಯುದಯಿಕಂಗಳನಿತುಮಾಸಾಲದ ಬಟ್ಟೆಗೆ ಸಾಲದಿರ್ಪುದು. ಈಗಳಾಋಣಂ ನಿಶ್ಶೇಷಮಾಗಿ ತೀರ್ಚಿ ಪೋದುದಱಿಂದೀಯೆಸಗುವಾಭ್ಯುದಯಿಕಮನ್ವರ್ಥಮಾದುದೆಂದು ಸಂತಸದೊಳೆಸಗಿ ಸುಮುಹೂರ್ತದೊಳ್ **ಶ್ರೀಚಿಕದೇವರಾಯ**ನೆಂಬೊಳ್ಪೆಸರನಿಟ್ಟಂ. ಆಪೆಸರ ಪುರುಳಂ ಪರಿಕಿಸೆ ಸಕಲಲೋಕರಂಜಕನಾದುದಱಿಂ ರಾಯನೆಂದುಂ, ಆವಗಂ ಲೀಲೆಯುಂ ಗೆಲ್ಲಮುಮೊಳ್ನಡತೆಯುಂ ಪೊಗೞ್ತೆಯುಂ ಸಂತಸಮುಂ ಸೊರ್ಕುಂ ಕಳೆಯುಮುಂಟಾಗಿರ್ಪುದಱಿಂ ದೇವನೆಂದುಂ, ಇವನಿತುಂ ಚಿಕ್ಕಂದಿನೊಳ್ ಅನುಗೂಡುವುದಱಿಂ ಚಿಕದೇವರಾಯನೆನಿಸುಗುಮೆಂದುಂ, ಉಪೇಂದ್ರನವತಾರಮಪ್ಪುದಱಿಂ ಸಾಜಮಾದ ಪೆಸರೆಂದುಂ ಬಿಜ್ಜೆವಳರ್ ಪೆರ್ಕಳಂಗೊಳ್ವರ್. ಬೞಿಕ್ಕೆ ಪೇರುಕ್ಕೆವದೊಡನಳಹಿಯಸಿಂಗರಾರ್ಯರ ಕುವರಂಗಂ ರಾಯಗುವರನ ಕೆಳೆತನಕ್ಕೆ ತಕ್ಕಾಪ್ಪುಮಳವುಂ ದೊರೆಕೊಂಡಿರ್ಪುದಱಿಂದನ್ವರ್ಥಮಾದ **ತಿರುಮಲೆಯಾರ್ಯ**ನೆಂಬ ನಲ್ಪೆಸರನಿಟ್ಟು ಪಲವುಂ ರನ್ನ ಪೊನ್ನ ತೊಡವುಗಳನೊಳ್ಪುಡೆಗಳುಮನಿತ್ತು ಮನ್ನಣೆಗೆಯ್ದು ಸಂತಸದೊಳಿರೆ ;

—ಚಿಕದೇವರಾಯನ ಬಾಲಲೀಲೆ.—

ದಿನಕ್ರಮದೊಳ್ ಕುಮಾರನುಂ ಚಂದಿರನಂತೆ ಬಳೆಯುತ್ತೆ ಪೊಂಜರಪಣಿಯೊಳ್ ಕಟ್ಟಿದ ರನ್ನದೊಟ್ಟಿಲೊಳ್ ದಿಟ್ಟಿದೋಸಂ ತಟ್ಟದಂತೆ ಎರಡುಂ ಮೆಲ್ಗದಂಪುಗಳೊಳಿಟ್ಟ ಕಾಡಿಗೆಯ ಬಟ್ಟುಂ, ಕೊರಲೊಳ್ ಕಟ್ಟಿದ ಪಂಚಾಯುಧಮುದ್ರಾಂಕಿತಮಾದ ಕಿಱುದಾಲಿಯುಂ, ಪಣೆಯೊಳ್ ಕಾಪುಗೊಳಿಸಿದ ನಾರಾಯಣನ ಕಪ್ಪುರದ ಪಾದರೇಣುಬಿಂದುವುಮಂದಂಬಡೆಯೆ ತನ್ನೊಳ್ ತಾಂ ನೆವಮಿಲ್ಲದೆ ನಗುತ್ತುಂ ಮೆಯ್ಗೈಕಾಲ್ಗಳಂ ನೀಡುತ್ತುಂ ಮಲಂಗಿರುವ ಪಾಂಗಂ। ತನ್ನ ಕುಲವರ್ಧನನಪ್ಪ ಕುವರನಂ ಕಾಪಿಡಲ್ಕೆಂದು ರಾಗಾವಿಲನಪ್ಪ ಚಂದಿರನೆಯ್ತಂದನೆಂಬ ಸಂದೆಯಮುಂ ಸಮನಿ

ಸುತ್ತೆ ನಿಲುಕಿಯುಂ ನಿಲುಕದಂತೆ ಜೋಲ್ವ ರನ್ನಸೆಂಡನಂಡಲೆವುದರ್ಕೆಳ ವಳ್ಳಿದೋಳ್ಗಳನಡಿಗಡಿಗೆ ನೆಗಪುವುದಱಿಂದುದಯಾಚಲಶೃಂಗದೊಳ್ ಪತಂಗಮಂಡಲಕ್ಕೆ ಕೈನೀಡುತ್ತುಂಗವಿಪ ಮಱಿಸಿಂಗಮಂ ಪೋಲ್ವ ಚಲಮಂ। ಅಂತಃಪುರದ ಕಾಂತೆಯರೊರ್ವರ ಕೈಯಿಂದೊರೊರ್ವರಾಂತೊಕ್ವಣೆಯಂತೆರ್ದೆಯೊಳಿಂಬುಗೊಳಿಸಿ ಸಂತಸದೊಳ್ ನುಡಿಸುವಿನಮಲರ್ದ ಬಿಸಜದಂತೆಸೆವ ಚೆಂಬಾಯಿಂದಿನಿರಸದಂತೆ ನಸುಜೊಲ್ಲುಸುರಿಯೆ ತೊದಳ್ನುಡಿವ ಸೊಗಸಂ। ಪಳಿಕಿನೆಡೆಗೋಡೆಯ ಮಱಿಯೊಳಿರ್ಪ ಅರಸಂಚೆವಱಿಯಂ ಪಿಡಿಯಲ್ಕೆ ನೀಡಿದ ಕೆಯ್ ಸೋಂಕದೊಡಂ ಪಡಿನೆಟಲಂ ಕಂಡಂಜಿಯುದಿತ್ತಲುಮತ್ತಲುಂ ಪರಿಯುತ್ತಿರೆ ತಾನುಂ ಪರಿಪರಿದು ಬೆಂಬಿಡದೆ ಮೊಗಸಾಲೆಯ ಪೊಂಜಗಲಿಯ ಪಚ್ಚೆಗಂಬದ ಮುಂಬಾಗದೊಳ್ ಬಜ್ಜರಂಗಳಿಂ ಘನಮೆದಂಚೆವಱಿಯಂ ಪಿಡಿದೆಟಿಿದೆಟಿಿದು ಕೋಟಲೆಗೊಳ್ವ ಸಂಭ್ರಮಮಂ। ಬೆದಱುಗಣ್ಗಳುಂ ನುಣ್ಮೆಯ್ಯುಂ ಸಣ್ಣಗಾಲ್ಗಳುಮಾಗಿ ತನ್ನ ಕೊರಲ ಕಿಱುಗಂಟೆಯ ದನಿಗೆ ಬೆರ್ಚಿದಂತೆಡೆಯೊಳ್ ನಿಲ್ಲದೆ ನೆಗೆವೆರಳೆಯ ಮಱಿಯ ಪಿಂತಣೆರಡುಂ ಕಾಲ್ಗಳಂ ಪಿಡಿದು ಎಟಿಿವದಟಂ ಕಂಡು ದಾದಿ ಕದುಬಿನೊಳ್—ಬೇಡಬೇಡಲೆ ಕಂದ ! ಬೇಡ ಬೇಡೆನ್ನಾನೆ ! ಬೇಡ ಬೇಡೆನ್ನ ಮಱಿಸಿಂಗವೆ ! ಬೇಡ ಬೇಡ—ಎನುತ್ತೆ ಬಟಿವಿಡಿದು ತಱುಬಿದೊಡಮವಳ ಕೆಯ್ಗ ಸಿಲ್ಕದಂಗಳದೊಳ್ ಬಳಬಳಿಸಿ ಬವಣಿಗೊಳಿಸಿ ಬಟಲಿಸುವ ಬಲ್ಪಂ। ಎರಡುಂ ನಿಡುದೋಳ್ಗಳಂ ನೀಡಿ ಕರೆವ ಪಲವುಂ ರಾಯರಸಾಲ್ಗಳಂ ಕಡೆಗಣ್ಗಳಿಂ ಕಡೆಗಣಿಸಿ ಕೌತುಕದಿಂದೊಂದೆ ಸೂಟಿಬೊಳ್ ಕವಿವ ದಿವ್ಯಾಸ್ಥಾನದ ಪಲವುಂ ಜನದ ನೇಹದಿಟ್ಟಿಗಳೆನಿಪ ಮಾವಟಿಯೊಳ್ ನನೆದೊಯ್ಯರದೊಳ್ತನ್ನ ರನ್ನದ ಸಿಂಗವಣೆಯಂ ಸೇರಿ ನಿಲ್ವಂದಮುಮಂ ನಿರವಿಸಿ ರಾಯುಂ ವಿಭವದೊಳಿಂದ್ರನಂ ದೊರೆಕೊಣ್ಡಿದುರ್ಗಂ ಕಣ್ಗಳಿಂದೆಯುಂ ದೊರೆಕೊಳಲೆಳಸಿದಂ.

ಇಂತು ಸಂತಸದೊಳ್ ಬಳೆವ ರಾಯುಗುವರನೊಡನಳಹಿಯುಸಿಂಗ

ರಾರ್ಯನ ಕುವರಂ ತಿರುಮಲೆಯಾರ್ಯನೆಣೆದೊಟ್ಟಿಲೊಳ್ ಬಳೆದು ತಳರ್ನಡೆಯೊಳಂ ತೊದಳ್ನುಡಿಯೊಳಂ ಬಱಸಂದು ಪಲವುಂ ಬಾಲಲೀಲೆಯೊಳಂ ಪಡಿನೆಲಲಂತಿರ್ಕುಂ.

— ಚಿಕದೇವರಾಯನ ವಿದ್ಯಾಭ್ಯಾಸ —

— ಲಿಪಿಗ್ರಹಣ —

ಕ್ರಮದೊಳ್ ಚಿಕದೇವರಾಯನುಪನಯನಾದಿ ವರ್ಣಧರ್ಮ ಪರಿಕರ್ಮಿತನಾಗಿ ಬಿಜ್ಜೆಗಳ್ವೆಡೆಯೊಳ್ ಬುದ್ಧಿಕೌಶಲಮಂ ಕಂಡತಿಹರ್ಷದೊಳ್ ಕಲಿಸುವುಪಾಧ್ಯಾಯರ ಬಿಜ್ಜೆಗಳನಿತುಮಂ ಕಱಿಗಳೆದ ಕೈಪಿಡಿಯಂ ಪೋಲ್ವ ತನ್ನ ಚಿತ್ತದೊಳ್ಕೊಂಡು ಪೊಸಪೊಗರಂ ಪೊಣ್ಮಿಸಿದಂ. ಪಲವುಂ ಬಿಜ್ಜೆಗಲಿಸುವುಪಾಧ್ಯಾಯರ್ಕಳೊಳ್ಗಬ್ಬಂಗಲಿಸುವರ್ ಮಹಾರಾಯನ ಸನ್ನಿಧಿಗೆ ಬಂದು, ಸಂತಸದೊಳ್—'' ದೇವ ಚಿತ್ತವಿಪುದು, ಕುಮಾರ ಚಿಕದೇವರಾಯನೋದುವೆಡೆಯೊಳ್ ಶ್ವಾಸ ನಾದ ಘೋಷಾಲ್ಪಪ್ರಾಣತ್ವ ಮಹಾಪ್ರಾಣತ್ವಂಗಳ್ತೋರ್ಪಡುವಂತಕ್ಕರಂಗಳಂ ತತ್ತದುಚಿತಸ್ಥಾನಪ್ರಯತ್ನಂಗಳಿಂದುಚ್ಚರಿಪ ವಾಕ್ಪಟುತ್ವಮುಂ, ಅಕ್ಕರಂಗಳೊಂದಱಿಳೊಂದು ಬೆರಸಿ ಸಂಕರಮಾಗದಂತೆಯುಂ ಒಂದಱೊಂದಗಲಿ ಯಸಂಗತಮಾಗದಂತೆಯುಂ ಅತಿವೇಗಮಂ ವಿಳಂಬಮುಮನುೞಿದು ಮಧ್ಯವೇಗದೊಳೋದುವ ವಾಚಕಶಕ್ತಿಯುಂ, ನುಡಿಯೊಳ್ ಪುದಿದರ್ಥಮಂ ಕೆಯ್ಯ ನೆಲ್ಲಿಯ ಕಾಯಂತೆ ತೋರ್ಪವೋಲ್ ಪದವಾಕ್ಯದ ವಿಚ್ಛಿತ್ತಿಯೊಳ್ ನಿಲಿಸುವ ನೆಟ್ಟನೋದುವ ಅರ್ಥಾನುಗುಣವಾಗಿ ಧ್ವನಿಯೊಳ್ ಮೆಲ್ಪು ಬಲ್ಪು ನುಣ್ಪು ಬಿಣ್ಪುಗಳಂ ಸುಮೆನಿಸುವೋದಾಳಿತನದೋಜೆಯುಂ, ಕೇಳ್ದ ಪುರುಳಂ ಬಗೆಗೊಳಿಸಿ ಊಹಾಪೋಹಂಗೆಯ್ದೀ ಪ್ರಕರಣಕ್ಕಿದು ತಾತ್ಪರ್ಯಮೆಂಬುದಂ ನಿಶ್ಚಯಿಸಿ ಕುಱುಪುಗೊಂಡು ಮಱೆಯದೆ ನೆನೆದಿರ್ಪ ಧಾರಣಾಶಕ್ತಿಯುಂ, ಪೆಱರ್ಗೆ ತಿಳಿಪುವೆಡೆಯೊಳ್ ಪದಪದಕ್ಕರ್ಥಮಂ ಬೇರ್ಪಡಿಸಿ ಬಿತ್ತರಿಸಿ ಪೆಂಪುಗೊಳಸಿಯುಂ ತಾತ್ಪರ್ಯಮನಿ

ತನಿತುಮನೊಂದುಗೊಳಿಸಿ ಒಂದೆಱಟ್ನುಡಿಯೊಳಡಕಂಗೆಯ್ದು ತಿಳಿಯೆ ಪೇೞ್ವರ್ಥಾಪಾದನಸಾಮರ್ಥ್ಯಮುಮತ್ಯದ್ಭುತಮಾಗಿರ್ಕುಂ. ಈ ಬುದ್ಧಿ ಕೌಶಲಮೆಲ್ಲಿಯುಂ ಕಂಡು ಕೇಳ್ದುದುಮಲ್ತು !'' ಎಂದು ಪೊಗೞ್ದರ್

— ವಾಚನಾರ್ಥಗ್ರಹಣ —

ಪದವಾಕ್ಯಪ್ರಮಾಣಂಗಳನೋದಿಸುವರುಂ—'' ಚಿತ್ತವಿಪುದು ಮಹಾರಾಯಂ. ಈರಾಯಗುವರಮೋದಿದೊಂದೊಂದುಂ ಪ್ರಕರಣಂಗಳೊಳ್ ಪೂರ್ವಪಕ್ಷಸಿದ್ಧಾಂತದ ಯುಕ್ತಿಗಳನಿತುಮಂ ಕ್ರೋಡೀಕರಿಸಿ ಅವಱೊಳ್ ಪೊಟ್ಟುಗಳಂ ಕಳೆದು ಸಾರಂಗಳಂ ಸಂಗ್ರಹಿಸಿ ಅವಱೊಳವಿದು ಪ್ರಬಲ ಮಿದು ದುರ್ಬಲಮೆಂಬ ತಾರತಮ್ಯಮನಾರಯ್ದು ಮೂಲಯುಕ್ತಿಗಳನೆ ಕಱುಪುಗೊಂಡಿರ್ಪ ಪಾಂಡಿತ್ಯಮುಂ, ವಾದಕಥಾವಿನೋದದೊಳ್ ಪ್ರತಿವಾದದೊಳೆಸಗುವುಪನ್ಯಾಸಮನಾಲಿಸಿ ಅದಱೊಳ್ ಪ್ರಕೃತೋಪಯೋಗಮಿಲ್ಲದ ಯುಕ್ತಿಗಳಂ ಬೇರ್ಪಡಿಸಿ ಕಳೆದು ಉಪಯುಕ್ತಮಾದುದಱೊಳಂ ಸಾಧ್ಯಸಾಧನಸಮರ್ಥಂಗಳಲ್ಲಿ ಯುಕ್ತ್ಯಾಭಾಸಂಗಳಂ ಕಡೆಗಣಿಸಿ ಮೂಲಯುಕ್ತಿಯುಂ ಕುಱುಪುಗೊಂಡದಂ ಪ್ರತಿಯುಕ್ತಿಯಿಂ ಜಯಿಸುವ ಕೌಶಲಮುಂ, ಸ್ವಪಕ್ಷೋಪನ್ಯಾಸಂಗೆಯ್ವೆಡೆಯೊಳ್ ಪ್ರಕೃತ ಸಾಧ್ಯಸಾಧನದೊಳ್ ಪೆರ್ಚುಕುಂದುಮಿಲ್ಲದೆ ಸಮರ್ಥಮಾದ ಮೂಲ ಯುಕ್ತಿಗಳನೆ ಪವಣ್ಗೆಯ್ದು ವಾದಿಯುಂ ನಿರುತ್ತರಂಗೆಯ್ವ ನೈಪುಣ್ಯಂ ಮುಂತಾದ ಪಲವುಂ ವಾದಚಾತುರ್ಯಂಗಳಂ ಪೊಗೞ್ವೊಡೆನಿತಾನುಮೊಳವು. ಅವಂತಿರ್ಕೆ. ಮುಂಬಗಲಾಮೋದಿಸಿದುದಂ ಮಱುವಗಲ್ ಕೇಳ್ವಿನಮವಱೊಳೂಹಾಪೋಹಂಗೆಯ್ದು ತಾತ್ಪರ್ಯಮಂ ಗ್ರಹಿಸಿ ಯೊಳ್ಪುವಡಿಸಿ ತಿಳಿಯೆ ಪೇೞ್ವುದಱಿಂ ಅಧ್ಯಾಪಕಾಧ್ಯೇತೃಕಭಾವಂ ಪಲ್ಲಟಮಾಗಿ ತೋರ್ಕುಂ'' ಎಂದು ಪೇೞ್ದು ಪೇರಚ್ಚರಿವಡಿಸಿದರ್.

— ಪುರಾಣಪರಿಶ್ರಮ —

ಪೌರಾಣಿಕರುಂ—'' ಆನೋದುಗಲ್ತಂದುಮೊದಲಿಂದುವರೆಗಂ

ಪಲವುಂ ಪುರಾಣಂಗಳಂ ಪಲರ್ವೆ ತಾಳಿಂ ತುದಿವರೆಗಮಾದ ಪಲವುಂ ವ್ಯಾಖ್ಯಾನಂಗಳಿಂದರ್ಥನಿಶ್ಚಯಂಗೆಯ್ದು ಪೆಱರ್ಗೆ ಪಲವುಮಾವೃತ್ತಿಯೊಳ್ ಪೇೞ್ದಿರ್ಪನಾದೊಡಂ ಮಹದಾದಿಚತುರ್ಮುಖಾಂತಮಾದ ಸಮಷ್ಟಿಸೃಷ್ಟಿಯಂ, ಅವನೊಡರ್ಚುವ ವ್ಯಷ್ಟಿಸೃಷ್ಟಿಯಂ, ಮನ್ವಂತರಂಗಳಂ, ದೇವಮನುಷ್ಯಾದಿವಂಶಂಗಳಂ, ಆ ವಂಶದೊಳ್ ಪ್ರಸಿದ್ಧರಾದವರ ಪೆಸರ್ಗಳಂ, ಚರಿತಂಗಳಂ ತಿಳಿದಿರ್ಪುದಲ್ಲದೆ ಚಿತ್ತದೊಳ್ ನೆನಪು ತೋಱದು. ಈ ಕುವರಂ ಸೃಷ್ಟಿಗೆಯ್ವ ನಾರಾಯಣನೆನಿಪ ಪರಬ್ರಹ್ಮದಿರವಂ, ಸೃಜಿಸಿದ ಪ್ರಕೃತಿಮಹದಹಂಕಾರಂಗಳುಂ ಪಂಚತನ್ಮಾತ್ರಗಳುಮೆಂಬೆಣ್ಟುಂ ಪ್ರಕೃತಿಗಳುಂ ಏಕಾದಶೇಂದ್ರಿಯಂಗಳುಂ ಪಂಚಮಹಾಭೂತಂಗಳುಮೆಂಬ ಪದಿನಾಱುಂ ವಿಕಾರಂಗಳುಮೆಂಬಿರ್ಪತ್ತುನಾಲ್ಕುಂ ತತ್ವಂಗಳ ಕ್ರಮಂಗಳಂ, ಅವಱ ಗುಣಭೇದಂಗಳಂ, ಇವಱಿಂ ಸಮೆದ ಅಜಾಂಡಮಂ, ಅದಱೊಳೊಗೆದ ನಾಲ್ಮೊಗನ ತೆಱನಂ, ಆವಂ ಪೊಣ್ಮಿಸಿದ ಮಾನಸಾಂಗಿಕಸೃಷ್ಟಿಭೇದಂಗಳಂ, ಅಲ್ಲಿ ಪುಟ್ಟಿದ ಸತ್ವರಜಸ್ತಮೋರೂಪಗುಣಭೇದಭಿನ್ನಂಗಳಾದ ದೇವಮನುಷ್ಯತಿರ್ಯಕ್ಸ್ಥಾವರರೂಪ ಪ್ರಾಣಿಗಳಂ, ಅವಱೊಳ್ ನವಪ್ರಜೇಶಮನ್ವಾದಿಗಳ ಮಿಥುನಸೃಷ್ಟಿಯಿಂದೊಗೆದ ವಂಶಭೇದಂಗಳಂ, ಅವಱೊಳುದಿಸಿದ ದೇವತೆಗಳ ಋಷಿಗಳ ರಾಯರ ಪೆಸರ್ಗಳಂ, ಅವರವರೀಕಾಲದೊಳೀದೇಶದೊಳೀಪೂರುಗಳೊಳಿರ್ದೀಚರಿತ್ರಂಗಳನೆಸಗಿದರೆಂಬುದಂ, ಅವನಿತರ್ಕಂ ಆಧಾರಮಾದ ಪದಿನಾಲ್ಕುಂ ಲೋಕಂಗಳ ವಿಸ್ತಾರಮಂ, ಅದಱೊಳ್ ಭೂಲೋಕದ ಪಲವುಂ ದೀವಿಗಳೊಳಿರ್ಪ ಭೋಗಭೂಮಿಗಳಂ, ಪೊೞಿವೆಟ್ಟುಗಳೊಳಂ ಮಂಜುವೆಟ್ಟನಿಂ ತೆಂಕಣ ಕಡಲ್ವರೆಗಮಗಲಮಾಗಿ ಮೂಡ ಪಡುವಣ ಮುನ್ನೀರ್ವರೆಗಂ ನೀಳ್ದ ಭಾರತವರ್ಷದೊಳೀ ಯೆಡೆಯೊಳೀಗಟ್ಟಮೀಬೆಟ್ಟುಗಳೀ ಪೊೞಿಗಳ್ ಪೊೞಲ್ಗಳಿವನಾಳ್ದ ದೊರೆಗಳ ಪೆಸರಿದಿವರ ಸಾಸಮಿದು ಇವರಾಳ್ದ ಕಾಲಮಿನಿತು ಈ ಗಟ್ಟಬೆಟ್ಟುಪಟ್ಟಣ ಪೊೞಿಗಳೊಂದರ್ಕೊಂ

ವಿನಿತಿನಿತು ಗಾವುದದೊಳಿರ್ಕುವೆಂದಿವು ಮುಂತಾದ ವಿಶೇಷಂಗಳನಿತುಮಂ। ತತ್ತತ್ಪುರಾಣಂಗಳ ಸೂಕ್ಷ್ಮಾರ್ಥಗ್ರಹಣದಿಂದೆಯುಮಪಾಯಾನೆಲೆಗಳಂ ಬಲ್ಲವರಿಂದೆಯುಂ ತಿಳಿದು ಬಗೆಯೊಳ್ ಬಂದಿವಿಡಿದುಮುದಱೊಳೇನಾನು ನೊಂದು ಸಂದೆಯಂ ತೋಱಿ ಬಂದೆಮ್ಮಂ ಬೆಸಗೊಳ್ವಿನಂ ಎಮಗೆ ನೆನೆಪಿಲ್ಲ ವಿರ್ದೊಡಂ ಪೆರ್ಮೆಯಿಂದೊಳಗುಗುಡದೆ ಇದಂ ಪಿಂತಣ್ಗೆ ಪೇೞ್ದುವೆಂದುಂ ಮುಂತಣ್ಗೆ ಪೇೞ್ವುವೆಂದುಂ ,ಈತೆಱದ ಬಱಿಸಂದೆಯುಮಂ ಕೇಳಲಾಗ ದೆಂದುಂ ಕೆಕ್ಕರಿಸಿ ನೋಡಿಯುಂ ಬೆದಱಿಸಿ ನುಡಿದುಂ ದಂಧನಂಗೆಯ್ದುಂ ಕಾಲನುಂ ಕಳೆವೆವು, ಎಮಗಿನ್ನು ತೆಱನಾವುದು ?'' ಎಂದೊರೆದಾನಂದಂ ಬಡಿಸಿದರ್.

— ವೀಣಾಪರಿಶ್ರಮ —

ವೈಣಿಕರುಂ—'' ತಮ್ಮ ಜನ್ಮಂಗಳಿಂದು ಸಫಲವಾದುವು, ವೀಣಾವಾದ್ಯಮನವದ್ಯವೆಂಬುದಿಂದು ನಿಶ್ಚಿತವಾದುದು. ಗಾನಂ ಮನೋಹಾರಿಯೆಂಬುದನುಭವಕ್ಕೆ ಬಂದುದು. ರೈವತಕರಾಯುಂ ಬ್ರಹ್ಮ ಸಭೆಯೊಳ್ ಗಾಂಧರ್ವಮನಾಲಿಸುತ್ತೆ ಪೋದ ಪೊೞ್ತಱಿಯದಾದೆನೆಂ ಬುದುಂ ಯುಕ್ತವೆನಿಸಿರ್ಪುದು. ಗೋಕುಲದೊಳ್ ಕೃಷ್ಣಂ ಕೊಳಲ್ಗೊಳ್ವಿ ನಮಾದನಿಯಂ ಸವಿದು ಮೆಯ್ಮಱಿದು ಪಸುಪುಲಿಗಳಾನೆಸಿಂಗಂಗಳ್ಮೊದ ಲಾದುವು ತಂತಮ್ಮ ಬಿಗುರ್ಪು ಬೇರಂಗಳನುೞಿದೊಂದುವೆರಸಿರ್ಪುವು ! ಅಚ್ಚರಸಿಯರುಮಚ್ಚರಿವಡೆದು ಗೋವಳಗನ್ನೆಯರೊಡನೆೞ್ಚಱೊಳಿ ರ್ಪರ್। ಮರಂಗಳುಂ ಮಾನಸರಂತೆ ನವಿರ್ದಳೆದಿರ್ಪುವೆಂಬಿವುಂ ಕರಬದರ ಸದೃಶವಾದುವು. 'ಈ ಯತಿಶಯಮೆನಿತೆಂದು ಬಣ್ಣಿಪೆವು ? ಬಿಜ್ಜವನೆ ಯೊಳ್ ಕುವರಂ ಬೀಣೆಗೊಳ್ವಿನಮನಿತುಂ ತಂತಿಗಳೊಳಂ ಕೊರಲೊಳ ಮೊಂದೆ ನುಣ್ದನಿ ಪೊಣ್ಮತೆಂಬಂತೆ ಕೂಡಿದ ಶ್ರುತಿಯ ಸೊಬಗುಂ ಕತ್ತು ರಿಯ ವೀಣೆಯಂ ಬಿರ್ಚಿದೊಡನುಣ್ಮುವ ತನಿಗಂಪಿನಂತೆ ಗಮ್ಮನೆ ಕವಿವ ನಾದಮುಂ, ಗಿಳಿಮೂಗಂ ಪೋಲ್ವ ಬಳಗೆಯ್ಯುಗುರ್ಗಳಿಂ ತಂತಿಗಳಂ

ಪಿಡಿವ ಮಿಾಂಟುವ ಸೈಪಿನಿಂದೆಯುಂ ಪೆಱಗೆಯ್ವೆರಲ್ಗಳೊಳಾಹತ ಪ್ರತ್ಯಾಹತ ಸ್ಫುರಿತ ಕಂಪಿತಾದಿ ಗಮಕಂಗಳಂ ಪವಣ್ಗೆಯ್ವ ಚಾತುರ್ಯದಿಂದೆಯುಂ ಸ್ವರಂಗಳ್ ತಕ್ಕತಕ್ಕೆಡೆಯೊಳ್ ಮೆಲ್ಪಂ ಬಲ್ಪಂ ನುಣ್ಪಂ ಬಿಣ್ಪಂ ಪಡೆದು ಒಳ್ಪಡದಿಯೊಡಲಂತೆಲ್ಲೆಡೆಯೊಳಂ ಚೆಲ್ವುವೆತ್ತು ಮನಂಗೊಳಿಸುವುವು. ಕ್ರಮದೊಳೊಂದರ್ಕೊಂದು ಪೆರ್ಚುಗೆವಡೆದು ಬಳೆವ ತಾನಂಗಳ್ ತತ್ತದುಚಿತಸ್ಥಾನಂಗಳೊಳ್ ಬಿಗುಪೇಱುವ ತೂಗುವ ತೊನೆವ ನಯಂಬಡೆವ ನಿಡಿದೆನಿಸುವ ಸೊಂಪುಗೊಳ್ವ ಪೆಂಪುವಡೆವ ಜೀವಸ್ವರಂಗಳೊಳ್ ನಿಂದು ನಿಂದು ನಲವೇಱುವ ಸೊಗಸು ನಿರವಿಸಲರಿದು. ಮತ್ತಮಾನಾದಂ ಬಿಣ್ಣವನೆಯೊಳ್ ಬಂದು ನಲಿದು ನರ್ತಿಸುವ ಸರಸತಿಯ ಕಾಲಂದುಗೆಯ ಕಿಱುಗೆಜ್ಜೆಗಳಿನಿದನಿಯುಮವಳ ಮುಂಗೆಯ್ಯೊಳಿರ್ದ ನುಡಿವರಗಿಳಿಯ ಮುದ್ದುದನಿಯುಂ, ಕನ್ನವುರದ ಚೆನ್ನೆಯ್ದಿಲಿಂದೊಸರ್ವ ನಿರಸಕ್ಕೆ ಮುಸುರ್ವ ಪೆಣ್ದುಂಬಿಗಳ ನುಣ್ದನಿಯುಮೊಂದುವೆರೆದು ಮುಪ್ಪುರಿಗೊಂಡಂತೆ ಮೋಹರಂಬಡೆದಿರ್ಕುಂ : ಅದೇಂ ವಿಚಿತ್ರಮೋ ! ತಂತಿಯನಲೆಗೆಯ್ದ ಬೆರಲ್ಗಳ್ ಅಂದು ಹೃದಯದಾನಂದದ ನಾಡಿಗಳೊಳಾಡುವಂತೆ ಮನಮಂ ಸೋಲಿಸಿ ಸೊರಗಿಸಿ ಸೋರ್ಕೇಱಿಸಿ ಸೊಗಂಬಡಿಸೆ ಆಮುಮುಲುಗದಂಗಮುಮ್ಮಾಡದೆಮೆಯುಮಾಗಿ ಚಿತ್ರಿಸಿದಂತಿರ್ದುಂ ಪೊಣ್ಮುವ ನವಿರಿಂದೆಯುಂ ಪೊನಲಿಡುವಾಲಿನೀರಿಂದೆಯುಂ ಬಿಗಿವ ಕೊರಲ ಸೆರೆಗಳಿಂದೆಯುಂ ಬಿಡದೆ ಕಿವಿವಾಯೊಳ್ಕಾಪುಗೊಂಡಿರ್ಪ ಮನೋವೃತ್ತಿಯಿಂದೆಯುಂ ಚೇತನರೆನಿಸಿರ್ಪವು. ಕಿವಿಪೊಡೆಯೊಳ್ ತುಂಬಿದಾನಂದಂ ಎರ್ದೆಗಿೞಿದು ಹೃತ್ಕಮಲಮಂ ವ್ಯಾಪಿಸೆ ಚೈತನ್ಯಂ ತದಾತ್ಮಕಮಾಗಿ ಪರಿಣತಮಾದುದಱಿಂ ಪ್ರಪಂಚಮನಿತುಂ ನಾದಮಯಮಾಗಿ ತೋರ್ಪುದು. ಬೇರಂ ತುದಿಯಂ ಬಿರಿದುದಂ ಬೆಂಡಾದುದಂ ಕಳೆದಾಯ್ದು ಪೊರೆಯೆತ್ತಿದೊಳ್ಗಬ್ಬಿನ ಸೀಯುಂ, ಪಿರಿದುಂ ಕಾಸಿ ಸಕ್ಕರೆವೆರಸಿದ ಚೆನಿನಾಲ ಸವಿಯುಂ, ಆಗಳಟ್ಟಿದು ತಂದು ಪಿೞಿದ ಪೊಸಜೇನ ಸರಿಯಿಂಪುಂ, ಕಾಲದೊಳ್

ಮೋಹಂಸಿ ಬೆಳೆದು ಪದದೊಳ್ಪಣ್ತೆನಿದೆನಿಸಿ ನೆಗಟ್ದ ಮಾವಣ್ಣಿನ ಮಾಧುರ್ಯ ಮುಂ ಇದಱ ಸಾಸಿರದ ಸಾಸಿರದೊಳೊಂದುಂ ಪಾಲಿಂಗೆ ಬಾರದು. ನಾದಮಾಗಿಯುಂ ಕಿವಿಯೊಂದಱೊಳೆ ಸಂದಿರ್ಪುದಲ್ತು, ಸಕಲೇಂದ್ರಿಯಂ ಗಳನೊಂದೆ ವೇಳೆಯೊಳಾನಂದಸಾಗರದೊಳ್ ಮುೞುಂಗಿಪುದು. ಸುಗ್ಗಿ ಯೊಳ್ ಪುತ ಮಲ್ಲಿಗೆಯ ಪೊಸಪೂದೊಂಬೆಯೊಳ್ ಪೊದಟ್ದು ಪೊಣ್ಮುವ ತನಿಗಂಪಿನಂತೆಯುಂ, ಆಕಂಪಂ ಕವರ್ದು ಸೊರ್ಕಿ ಸುತ್ತುಂ ಪರಿವ ತುಂಬಿಗಳೆಱಂಕೆವೊಯ್ಲುಂ ಮುಂ ಬಾವನ್ನಗಾಡೊಳ್ ಪಾವುಗಳ್ ನುಂಗಿದುದಱಿಂ ಬಂದ ಬಡತನಮಂ ಕಳೆದು ಬಳೆದು ಮಾಂದೋಪಿ ನೊಳ್ ಸುರಿವ ಪೂಜೇನ ಸರಿಯೊಳ್ ನನೆದೊಯ್ಯನೆ ತೀಡುವ ತೆಂಗಾಳಿಯ ಸೋಂಕಿನಂತೆಯುಂ, ಆ ಸೋಂಕಿನಿಂ ಮುಂ ಬಗೆಯೊಳೊಗೆದ ಮದನಾಗ್ನಿ ದಳ್ಳುರಿಗೊಂಡು ಪೂಱಪೊಣ್ಮುವಿನಮದರ್ಕೆ ತಳಿರ್ದೊಂಬೆಗಳಂ ತಾವರೆ ದಂಟುಗಳಂ ಪೊತ್ತುಂ ಪನ್ನೀರೊಳ್ ನನೆದುಂ ಮಲರ್ವಾಸಿನೊಳ್ ಪೊರಳ್ದುಂ ತಣ್ಪುಗಾಣದ ಬಿರಯಿಗಳಾವಿರಹಂ ಕಱಿದೊಡಗೂಡುವಾಗಳ್ ತಂತಮ್ಮ ಮೆಯ್ಬಿಸುಪಡಂಗಿ ತಣ್ಪುಗೊಳ್ವವರೆಗಂ ತಂತಮ್ಮ ತೋಳ್ಗ ಳ್ತಣಿವ ವರೆಗಂ ಮಿಕ್ಕುದೇಂ ಪೊಟ್ಟೆಱವರೆಗಮಟ್ಟೆಱಿಂದೆಸಗುವ ತೞ್ಕೆಯೊಳ್ ಮತ್ತೆಮತ್ತೆಱುವ ಬಿಗುಪಿನಂತೆಯುಂ ಸೊಗೆಮಂ ಸೂಱೆ ಗುಡುತಿರ್ಪುದು. ಎಂತಪ್ಪ ಕಲ್ಲೆರ್ದೆಯವರಾದೊಡಂ ಈತಾನಮನಾಲಿಸು ವಿನಂ ಪಗಲಂ ಕಂಡ ಜಕ್ಕವಕ್ಕಿಯಂತೆಯುಂ, ಜೊನ್ನಮನೀಂಟುವ ಚಕೋರದಂತೆಯುಂ, ಕಾರ್ಗಾಲದ ಸೋಗೆಯಂತೆಯುಂ, ಮುಂಬನಿ ಯುಂಡ ಚಾದಗೆಯಂತೆಯುಂ, ನಿಧಿಯಂ ಕಂಡ ಬಡವನಂತೆಯುಂ, ವರಮಂ ಪಡೆದ ತವಸಿಯಂತೆಯುಂ, ಸಿದ್ಧಿಯಂ ಪಡೆದ ಯೋಗಿಯಂತೆ ಯುಂ, ಇಷ್ಟದೇವತಾಸಾಕ್ಷಾತ್ಕಾರಮಂ ಪಡೆದುಪಾಸಕನಂತೆಯುಂ, ನಲಿದು ನಲವೇಱಿ ಪಿಟ್ಗಿ ಪೆರ್ಕಳಂಗೊಂಡು ಸೊರ್ಕಿ ಸೊರಗುವರ್. ಮೆಲ್ಲೆರ್ದೆಯವರಾಲಿಸಿದೊಡಾಲಿಸುವ ಮುನ್ನಮೆ ಮನಂ ಕರಗಿ ಹರವಸಗೊಂ

ಡೆಸೆಗತಕ್ಕುದಿದು ಮಿಕ್ಕುದಿದೆಂಬ ವಿವೇಕಮನುೞಿದು ರಸಾವೇಶದಿಂದೀತಾನದ ಸವಿಯಂ ಸೇಱಿಯೊಳ್ ಮೊಗೆಮೊಗೆದೀಂಟಲುಂ ಮೆಯ್ಯೆಲ್ಲಮನಣ್ಪುಗೊಳಲುಂ ಮುಡಿಗೆ ಸೂಡಲುಂ ಕಿವಿವೊಡೆಯೊಳ್ ತುಂಬಿಕೊಳಲುಮೆಳಸಿದಂತೆ ಪಲವುಂ ಕೋಟಲೆಗೊಳ್ವರ್. ಅದವರ ತಪ್ಪಲ್ತು. ಬೆಳ್ಪುಮಾಸದ ಪೊಚ್ಚಪೊಸಪೂಗಳಂ ಪವಣ್ಗೊಳಿಸಿ ಕೋದೆತ್ತಿದ ವಕುಳಸರದಂತೆಯುಂ, ಸವಣದೊಳೀಟ್ಟ ಪೊಸಮಿಸುನಿಯ ಸಲಗೆಯಂತೆಯುಂ, ಎಡವಱಿಯದೊಂದೆ ತೆಱದೊಳ್ ಸುರಿವ ಪೊಸಜೇನ ಪೊನಲಂತೆಯುಮಾದ್ಯಂತದೊಳೇಕನಾದಮೆನಿಸುವ ತಾನದ ಸವಿಯ ಬಲ್ಪಿನ ತಪ್ಪೆಂದು ತಿಳಿಯವೇಟ್ಪುದು. ಈಗಳೀಮಾನವಲೋಕದೊಳ್ ನೆಗೞ್ತೆವೆತ್ತ ಬೀಣೆಗಾಱರುಂ ಮುನ್ನಿರ್ದವರುಮೀತೆಱದೊಳ್ ಬಿಗುಪಂ ಒಲವಂ ಕಳೆಯಂ ನಾದಮಂ ಪೊಸವಗೆಯ ತಾನಂಗಳಂ ಸಂದರ್ಭಿಸಿದುದಿಲ್ಲೆಂಬುದು ವಿದಿತಮೈಸೆ। ಕಿನ್ನರರುಂ ಗಂಧರ್ವರುಮವರೊಳ್ ಪೊಗೞ್ತೆವೆತ್ತ ಹಾಹಾಹೂಹೂಪ್ರಭೃತಿಗಳುಂ ತುಂಬುರು ನಾರದರುಂ ಆಸರಸ್ವತಿ ತಾನುಂ ಪವಣಿಸಿದುದಿಲ್ಲೆಂಬುದುಂ ನಿಕ್ಕುವಂ. ಮೇಣುಂಟಾದೊಡೆ ನಾಡೊಳ್ ನೆಗೞ್ತೆವಡೆಯದಿರ್ಕುಮೆ ? ಅನಾದಿಕಾಲದೊಳಿಲ್ಲದ ಸಾಹಿತ್ಯದ ರಕ್ತಿವಿಶೇಷಂ ವಾಲ್ಮೀಕಿಯಿನುಣ್ಮಿದಂತೆ, ಸಂಗೀತದ ರಕ್ತಿವಿಶೇಷಮುಮೀಗಳೀರಾಯುಗುವರನಿಂ ಪೊಣ್ಮಿದುದು. ಮುಂ ಸ್ವರಭೇದಮಂ ಲಯಭೇದಮಂ ರಾಗಭೇದಮನಱಿಯದ ಪಸುಗಳುಂ ಪೊಮ್ಮಱಿಯುಂ ಮೋಸುಗೊಂಡುದು ಬಿಜ್ಜೆಯ ಬಿನ್ನಣಮಲ್ತೆಂದಾಕೃಷ್ಣಂ ಈಗಳೀಪೊಸವರಿಜಿನೊಳ್ ಬಿಜ್ಜೆವಳರನಿಬರು ಮಚ್ಚರಿವಡುವಂತೆ ಆನಂದಲತಾಪ್ರತಾನಂಗಳೆನಿಪ ತಾನಂಗಳಂ ಬಿತ್ತರಿಸಿದಂ: ಅಲ್ಲದೊಡಿವು ಗಾಂಧರ್ವಾಸ್ತ್ರಮಂತ್ರದಂತನಿಬರಂ ಮಱವಡಸಿ ಮೆಯ್ಮಱೆಯಿಸುವ ತೆಱನಾವುದು ? ಈ ಜಗನ್ಮೋಹನಮಾದ ತಾನದಿರವಿಂತಿರ್ಕೆ. ಈರಾಯುಗುವರಂ ವೀಣೆಯಂ ಬಾಜಿಸಲ್ ಪೂಣ್ದ ತಾಣಕಮುಮಾಮೆಯ್ಸಿರಿಯುಮಾಮೊಗರಸಮುಮೆನ್ನಯ ನಯನಾನಂ

ದವಾಗಿರ್ಪುದು. ಸಂತಸದೊಳೊಯ್ಯನೆ ಕೆಯ್ಯೊಳ್ ಪಿಡಿದೊತ್ತಿಗೆ ಬರಿಸಿ ತೊಡೆಯ ಮೇಲಿರಿಸಿ ಪೇರೆರ್ದೆಯಂ ಸಾರ್ಚಿ ನೇಹಂಬೆರಸು ಮೆಯ್ದುಡಹಿ ರಾಗಾಲಾಪನಂಗೆಯಿಸಿ ಆಲಿಸುತ್ತೆ ಅಲರ್ವ ಮೊಗಮುಂ ಅಲೆವ ಕಣ್ಣುಂ ಸುರಿವಾಲಿನೀರುಮಾಗಿ ತಕ್ಕೆಡೆಗಳನುಗುರ್ಗಳಿಂದೊತ್ತುವ ಸೈಪುಂ **ಆ ಕಲಾವತಿವೀಣೆ** ಜಯಲಕ್ಷ್ಮಿಯಂತಿವನ ಭುಜಸಂಗದಿಂ ಸೊರ್ಕಿ ಕಳರವೋದಾರಮಾದ ನಾದಂಗಳನೊದವಿಪ ಸೊಗಸುಮಂ ನಿರವಿಸಿ, ಸಾಕ್ಷಾತ್ಕೃಷ್ಣಾವತಾರಮೆಂಬುದೇ ನಿಶ್ಚಿತಂ '' ಎಂದು ಬಿನ್ನವಿಸಿ ಆನಂದಂಬಡಿಸಿದರ್.

— ಖುರಳೀಪರಿಶ್ರಮ —

ಗರುಡಿಯೊಳ್ ಸಾದಕಮಂ ಕಲಿಸುವ ಜಟ್ಟಿಗರ್—'' ಚಿತ್ತವಿಪುದು ಮಹಾರಾಯಂ. ಗರುಡಿಯೊಳನಿಬರುಂ ತಾಂತಾಮೆಸಗುವ ಸಾದಕಂಗಳನುಟಿದು ಚಿತ್ರದ ಬೊಂಬೆಗಳಂತೆ ನಟ್ಟಾಲಿಯಲುಗದೆ ನಿಟ್ಟಿಸುತ್ತಿರೆ—ಈರಾಯುಗುವರಂ ಕಂಬಕೋಣತಂಗಳಂ ಲಾಗಿಸುವ ಚಳಕಮುಂ, ಆನೆಯ ಸೊಂಡಿಲಂತೆಯುಂ ಪೆರ್ಬಾವಿನಂತೆಯುಂ ಪತ್ತಿಸುತ್ತಿ ಬಿಗುಪೇಱುವ ತೋಳ್ತೊಡೆಗಳ ದೇಸೆಯುಂ ಮತ್ತಂ ಸಂಗರಣಂಗಳನೆತ್ತುವೆಡೆಯೊಳ್ ಗೋವರ್ಧನಮನೆತ್ತಿ ನಿಂದಾಗೋಪಾಲನ ಪಾಂಗಿನೊಳ್ತೊಳಪ ಮೊಗಮುಂ ತೋರ್ಪ ಪೇರೆರ್ದೆಯುಂ ಒಯ್ಯರದೊಳೂಱಿದ ಸಿರಿಯಡಿಗಳುಮಾಗಿ ನಿಂದ ನೆಲೆಯೊಳೊಂದೊಂದು ತೋಳ್ಗಳಂ ತಿರುಗಿಸಿ ನೆಗಪುವ ಸೈಪಿನಿಂದೆ ಎಡಬಲದೊಳಿನಿಸಿನಿಸುಂ ಮುಱಿಗೊಳ್ವ ಅಸಿನಡುವುಂ, ಓಸರಿಸುವ ಮೆಯ್ಯುಂ, ಒಲಿವ ಕೊರಲುಮಾದ ಮೆಯ್ಸಿರಿ ಜಟ್ಟಿಗರುಡಿಗಳೊಳಂ ನಟ್ಟುವ ಗರುಡಿಗಳೊಳಂ ಕಂಡುದಲ್ತು; ನಿಟ್ಟಿಪರ ದಿಟ್ಟಿಗಳಲ್ಲಿಯೆ ನಟ್ಟಂತೆ ನೆಲೆಗೊಳ್ವುವು. ಆರೇಖೆಯುಮಾತಾಣಕಮುಂ ಜಗನ್ಮೋಹನಮಾಗಿರ್ಪುದು. ಆದೊಡಮವಱಿಂ ಕಾಳೆಗಕ್ಕುಪಕಾರವಿಲ್ಲೆಂಬುದಱಿಂದಮಂ ಬಿತ್ತರಿಸದುಳಿಪಿ ಬಳೆವ ಮೆಯ್ಯ ಬಲ್ಪಂ ದಿಟ್ಟಿಯ ಸು

ಯ್ದಾನವುಂ ಗೆಯ್ಮೆಯ ಚಳಕವುಂ ನಿರವಿಸಲ್ಕವು ಲೋಕಾತೀತವಾಗಿ ರ್ಪುವು. ಇರ್ವುಡಿ ಬಲ್ಮೆಗಾಱರುಂ ಕಟಿದು ಕೀಟಿಗ್ಗೆಯ್ವುದಱಿಂ ಹೊಂತಕಾಱಿಗಳನಿಬರುಂ ಪಿಂದೆಗೆಯೆ, ರೋಸದಿಂದೊರ್ವ ಜಗಜಟ್ಟಿ ಇದಿರ್ಚಿ ಮುಂ ಮಧುರೆಯೊಳ್ ಕುವಲಯಾಪೀಡಕ್ಕಂ ಚಾಣೂರಂಗಂ ಮ್ರಾರ್ಮಲೆತಂತೆ ದಂಡೆಯುಂ ಪೂಡಿ ಸಾದಕದೊದವಂ ಮೆಱೆಯುತ್ತೆ ಎಡಕ್ಕಂ ಬಲಕ್ಕಂ ಪಿಂತಣ್ಗಂ ಒಯ್ಯನೊಂದೊಂದು ಪೆಜ್ಜೆಯುಂ ತೆಗೆದಾಸೆ ಯುಂ ಕೊಟ್ಟು, ಮೇಣವಂ ಕವಿದು ಬರ್ಪುದುಂ, ಇದಿರ್ಚಿ ನಿಂದು ಚಳಕ ದೊಳ್ ಪುಸಿಗೆಯ್ಯಂ ತೋಱಿ, ಆದರ್ಕವಂ ತನ್ನುಳ್ಳ ಬಲ್ಪನಿತಱೊಳಂ ಮುಂತಣ್ಗೆ ನಿಂತು ತುಂಬುಗೆಯ್ಯಿಕ್ಕುವಿನಂ, ಮುಂ ಕುವಲಯಾಪೀಡದ ಕೋಡಂ ಪೊಱತಟ್ಟಿದಂತೆ ತಪ್ಪಿಸಿ ತನ್ನ ಕೆಯ್ದುಳವುಂ ಅವನ ಮೊಗಕ್ಕೆ ಸಾರ್ಚುವಿನವುವನ ಬಲ್ಮೆ ಅವಂಗೆ ಪಗೆಯಾಗಿ ಮೂಗಿನ ಸೆರೆಯೊಡೆದು ಪೊಸನೆತ್ತರ್ ಪೊನಲಿಡೆ ಘಂಘೆಣಿಸಿ ಪಿಂತಣ್ಗೆ ಸರಿದು ಗೋಡೆಯುಂ ನೆಮ್ಮಿ ನಿಂದು ಬವಣಿಗಳೆದು ಅಚ್ಚರಿವಟ್ಟು ಕೆಯ್ಮುಗಿದು ಕಾಲ್ಗೆಱಗಿ ಸಾಕ್ಷಾತ್ ಕೃಷ್ಣನೆಂದು ನಿರವಿಸಿ ನಾಣ್ಚದೆ ನಲವೇಱಿದಂ. ಮತ್ತಮೊರ್ವ ನಡುಗರುಡಿಯ ಪೂಜೆಯ ಬಿರುದಿನ ಕೈಮೆಗಾಱನೊರ್ವಂ ತನ್ನೊಡಲ ಪೆರ್ಮೆಯುಂ ಕೈಮೆಯ ಬಲ್ಪಂ ನಂಬಿ ಪೆಣಗಲ್ಕೆಂದು ಕೆಮ್ಮಣ್ಣ ಕಳನಂ ಪೊಕ್ಕುಸರಿಬಿತ್ತರದೊಳ್ನಿಲ್ವಿನಂ, ಪಾರುಗಟ್ಟೆಗೆಯುವನುರ್ಬಿನೊಳೆಱಗುವ ಸೊರ್ಕಾನೆಯ ನಿಗ್ಗವಕ್ಕೆ ಎರ್ದೆಯೊಡ್ಡಿ ಸೋಂಕಟ ಮುನ್ನಮೆ ಒರ್ವ ಯ್ಯೊಳೊಲೆದು ತಪ್ಪಿಸಿ ಎಡೆಗೆಡಪುವಂತೆ ಕೆಡಪಿ ಬೆನ್ನೇಱಿಯುರಾಟದೊ ಳ್ಬಿಗಿದು ತನ್ನ ಸಾದಕದ ಚಳಕವುಂ ಮೆಱೆಯಲ್ಕೆ ಸಡಿಲವಿತ್ತದನವಂ ನೂಂಕುವನಿತಱೊಳೆ ಪೆಱತೊಂದಱಿಂ ಪೆಱತೊಂದೀತೆಱದೊಳೊಂದೆರ ಟ್ಗಳಿಗೆವರೆಗಂ ಪತ್ತಿದ ಮೆಯ್ ಬಿರ್ಚದೆ ಬಟಿಲ್ಚಿ ಬಸವಟಿಸಿ ಕಡೆಯೊಳ್ ಡೊಕ್ಕರದೊಳ್ ಬಿಗುಪೇಱಿಸುವುದುಂ ; ಅವನುಂ ಕವಿವ ಕಣ್ಗಟ್ಟಲೆ ಯುಂ ಸಡಿಲ್ವ ಕೈಕಾಲ್ಗಳುವಾಗಿಯೆ ಮುಱಿತೊಱಗಿದಂ. ಇದನೀ

ಗರುಡಿ ಪೊಕ್ಕರನಿಬರುಮಱಿತಿರ್ಪರ್. ಈನುಡಿಗಳೊಳೇನಾನುಂ ಇಚ್ಛಕಂ ಬೆರಸಿರ್ಪುದೆಂದು ತಿಳಿಯಲ್ಕಕ್ಕುದಲ್ತು. ಈಯರ್ಥದೊಳೆಮ್ಮ ಕುಲದೇವತೆ ನಿಂಬಜೆಯಡಿಗಳುಮೆಮ್ಮ ಗರುಡಿ ಕೃಷ್ಣನಡಿಗಳುಮೆ ಸಾಕ್ಷಿ !'' ಎಂದು ತಿಳುಪಿದರ್.

ಇಂತು ನುಡಿವ ಪಲವುಂ ಬಿಜ್ಜೆವಳರ ನುಡಿಗಳಿಂದುರ್ಕುವ ಸಂತಸದ ಸೊರ್ಕಿನೊಳ್ ಪೆರ್ಕಳಂಗೊಂಡು ಒಡನೆಬ್ಬಿ ಐದೊಳಚ್ಚರಿವಡುತ್ತಾಳೋಚಿಸಿದಂ :—ಲೋಗರೊಂದು ವಸ್ತುವನುತ್ತಮವೆಂದು ತಿಳಿದದಱ ಗುಣಂಗಳ್ಗೆ ಸಂತಸಂಬಡುತ್ತಿರ್ದೊಡಂ, ಆವಸ್ತುವಿನೊಳ್ ವಿಶೇಷ ಸಂಬಂಧವುಾದವರ್ಗೆ ಸಂತಸಮುಮತಿಶಯಮಾಗಿರ್ಪುದೆಂಬುದಪರೋಕ್ಷಮಾದುದು. ಸಸಿನೇಸರ್ಗಳುಂ ಕಾರ್ಮುಗಿಲುಂ ಜಗದಾನಂದಕರಂಗಳಾದೊಡಂ ಎಣೆವಕ್ಕಿಗಂ ತಣ್ಗದಿರ್ವಕ್ಕಿಗಂ ಸೋಗೆಗಂ ಸಂತಸಂ ಪಿರಿದಪ್ಪುದೆಂಬುದುಂ ಯುಕ್ತಮೆನಿಸಿದುದು. ಭಾರ್ಗವರಾಮಂ ದಿಗ್ವಿಜಯಂಗೆಯ್ದನೆನೆ ಪಾರ್ವರುಂ, ರಘುರಾಮಂ ನೆಗಟ್ತೆವೆತ್ತನೆನೆ ಎಮ್ಮರಮಕ್ಕಳುಂ ಪೆರ್ಕಳಂಗೊಳ್ವುದು ತಕ್ಕುದೆನಿಸುದುದು. ರಾವಣಂ ಸೀತಾದೇವಿಯುರಂ ಕೊಂಡೊಯ್ದನೆನೆ ಕುಲಶೇಖರಂ ದಂಡೆತ್ತಿದನೆಂಬುದುಮುಪಪನ್ನಮೆನಿಸಿದುದು. ಕೃಷ್ಣಂ ಬೆಣ್ಣೆಗಳವಿನೊಳ್ ಕಡೆದಾವಿಂದೊರಲೊಳ್ಕಟ್ಟುವಡೆದನೆಂಬುದನೆರ್ದೆಗೊಳಿಸಿ ಪರಾಂಕುಶಂ ಮೋಹಂಬಡೆದನೆಂಬುದುಚಿತಮಾದುದು. ಶ್ರೀಮನ್ನಾರಾಯಣಂ ಸರ್ವಜ್ಞಂ ಸರ್ವಶಕ್ತಂ ಸಕಲವಿದ್ಯಾಪ್ರವರ್ತಕನೆಂಬುದಂ ತಿಳಿದಿರ್ದೊಡಂ ಈಯವತಾರದೊಳ್ ಬಿಜ್ಜೆಗಲ್ತಂ ವಿನಯಂಬಡೆದಂ ಬೀರನೆನಿಸಿದಂ ಪೆಂಪುವಡೆದನೆಂದು ಪೇೞ್ದೊಡಮಚ್ಚರಿಯುಮಾನಂದಮುಂ ಸಂದಣಿಸುತ್ತಿದೆ. ರಕ್ಷ್ಯರಕ್ಷಕಭಾವಂ ಮೊದಲಾದ ಪಲವುಮದೃಷ್ಟಸಂಬಂಧಂಗಳತ್ತಣಿಂದೀಪಿತೃಪುತ್ರಭಾವರೂಪಮಾದ ದೃಷ್ಟಸಂಬಂಧಮೆ ಪ್ರೀತಿವಿಶೇಷಹೇತುವಾದುದಱಿಂ ಶ್ಲಾಘ್ಯಮಾದುದು. ಅದಱಿಂದೈಸೆ ! ಶುಕವ್ಯಾಸಪರಾಶರಾದಿಗಳುಂ ತಮ್ಮ ಋಷಿ

ಜನ್ಮಮಂ ಕಡೆಗಣಿಸಿ ಕುಂದ ಕದಂಬ ಗೋಪಿಕಾದಿಜನ್ಮಂಗಳನೆಳಸಿದರ್. ಅದಱಿಂದಾನುಮೆನ್ನ ಕುಲದೇವತೆಯೆಂಬುದಂ ಕೂಡದೆ ಕುವರನೆಂದೇ ಕೊಂಡಾಡುವೆನೆಂದು ನಿಶ್ಚಯಂಗೆಯ್ದು ನಂದನಂತಾನಂದದೊಳಿರ್ಪಂ.

ಮತ್ತಮಾರಾಯಗುವರಂ ಧರ್ಮಶಾಸ್ತ್ರದೊಳಂ ರಾಜನೀತಿಯೊಳಂ ಬಿಲ್ಕತ್ತಿಮೊದಲಾದ ಪಲವುಂ ಕೈದುಗೈಯ್ಮೆಯೊಳಂ, ಆನೆಕುದುರೆಗಳೇಱಾಟದೊಳಂ ಸಂಗೀತಶಾಸ್ತ್ರದೊಳಂ ನಾಟಕಾಲಂಕಾರಂಗಳೊಳಂ, ಪಲವುಂ ದೇಶಭಾಷೆಗಳೊಳಂ, ಪಲವುಂ ಕಲಾವಿದ್ಯೆಗಳೊಳಂ ಪ್ರವೀಣನೆನಿಸಿದಂ. ತಿರುಮಲೆಯಾರ್ಯನುಮವನ ಪಡಿನೆಟಿಲಂತೆ ಎಲ್ಲಾ ವಿದ್ಯೆಗಳೊಳಂ ಬಱಸಂದು ಬಣ್ಣಂಬಡೆದಂ. ಬಱಕ್ಕೆ ರಾಯಗುವರನೊಡಲೊಳೆಳವೆ ಇನಿಸಿನಿಸುಂ ಪಿಂದೆಗೆಯೆ ಜೌವನಮಡಿಯಿಟ್ಟುದದೆಂತೆನೆ :—

— ಯೌವನೋದಯ —

ತನ್ನ ಕೆಳೆಗಾವಂಗಿನ್ನೇಱಿಗೆಯಪ್ಪುದೆಂದು ಬಗೆದು ಮೊಗಸಸಿ ಪೊಗರೇಱಿದುದು. ಮೊಗದೊಳ್ನೆಲೆಗೊಂಡ ಸರಸತಿಯ ಕನ್ನವುರದ ಕನ್ನೈದಿಲ್ ಪಡಿನೆಟಿಲ್ಗೊಂಡಂತೆಸೆವೆಳಬವರಿಯೊಳ್ ತನಗಿದಿರಾದುದೆಂದು ಮುನಿದಂತೆ ಕಣ್ಗಡೆ ಕೆಂಗೆಱಿಗೊಂಡುದು. ಸವಿನುಡಿಯಿಂಚರಿಯಂ ಸುರಿವ ಚೆಂಬಾಯ್ದೆಱೆಗಳಂ ಬಂದುಗೆಗೆತ್ತು ಬಳಸಿ ಮುಸುಱಿದ ಪರಮೆವಱಿಗಳೆನೆ ಮೀಸೆ ಮೆಯ್ಸಿರಿವೆತ್ತುದು. ಇವಂ ಕಿಱಿದು ದಿನದೊಳೆ ಪಗೆರಾಯರ ಪೊಱಲ ಪೆರ್ಬಾಗಿಲಂ ಮುರಿವನೆಂದಳ್ಕಿಯುದಱ ಪೆರ್ಮೆಸಾರ್ದುದೆಂಬಂತೆರ್ದೆ ಬಿತ್ತರಮಾದುದು. ಅಲ್ಲಿಯ ಪೇರಗುಱಿಯ ದುಂಡುದೊಲೆಗಳ ಬಲ್ಪು ಬಱಸಂದಂತೆ ತೋಳ್ಗಳ್ತೋರಮಾದುದು. ನಾಲ್ದೆಸೆಯಂ ಗೆಲಲೆಳಸಿದೊಡೆನ್ನಂ ಬಿಗಿದು ಕಟ್ಟುವನೆಂಬ ಚಿಂತೆಯೊಳ್ ನಡುಬಡನಾದುದು. ಎಂತಪ್ಪ ನೆಱಿರಾವುತರುಮೇಱಲರಿದೆನಿಪ ಕಡುಪಿನ ವಾರುವಂಗಳೆಮಗೊಳಗಪ್ಪುವೆಂಬ ಗರ್ವದಿಂ ತೊಡೆಗಳ್ ಪೆಂಪುವಡೆದುವು. ಈತೆಱದೊಳ್ ತೋರದೊಡೆಯುಂ ಬಡನಡುವುಂ ಪೇರೆರ್ದೆಯುಂ

ದುಂಡುದೋಳುಂ ಬಲ್ಗಂದವುಂ ಪವಣ್ಮೀಸೆಯುಂ ಪೊಳೆವ ಮೊಗವುಂ ಪೊಗರೇಱುವ ಮನವುಮಾದ ಪೊಸಜೌವನದಿರವಂ ನಿರವಿಸಿ, ರಾಯಂ ಮನದೊಳಾಲೋಚಿಸಿದಂ :— ಎಮ್ಮ ಕುಲದೊಳ್ ನೆಗಟ್ದ ರಾಯರನಿಬರುಂ ಎಳವೆಯೊಳ್ ಬಿಜ್ಜೆಗಲ್ತು ಜೌವನದೊಳ್ ನಾಲ್ದೆಸೆಯಂ ಗೆಲ್ದು ಪೊರ್ದಿದರಂ ಪೊರೆದು, ದೇವರಂ ಪಾರ್ವರಂ ತೇಜಂಬಡಿಸಿ, ನಾಡಂ ಕಾಪಿಟ್ಟು ಬರ್ದಿನೊಳಾಂ ಪೊತ್ತ ಪೊಱೆಯಂ ತಮ್ಮೊಳ್ಗವರೊಳಿಱಿಪಿ ನಿಚ್ಚಸಿರಿಯನೆಳಸಿ ನೇಮಂಗೊಳ್ವರ್. ಆನುಮಂತೆಸಗಲ್ವೇಟ್ಪುದೆಂದೆಣಿಸಿ, ಅಳಹಿಯಸಿಂಗರಾರ್ಯನಂ ಬರಿಸಿ ನುಡಿದಂ :— "ಆನೊಂದು ಕಜ್ಜಮಂ ಪೇೞ್ವೆಂ : ಪಡಿನುಡಿಗುಡದೆಯದನಂಗೀಕರಿಪುದು, ಎನ್ನ ಕೆಳೆಯೆನ್ನೊಡನಾಡಿಯೆನ್ನಪಡಿನೆೞಲ್ ಎನ್ನೊಡವೆಯೆನ್ನ ಹರಣಮೆಂದೆನಿಸಿದೆನ್ನನಂತರಸೋದರಂ ಚಿಕದೇವಯ್ಯರಸಂ ಪರಸಂಪದವುಂ ಪಡೆದ ಬೞಿಕ್ಕೆನ್ನ ಪೊತ್ತ ಪೊಱೆಯನಿೞಿಪಲ್ಕೆಡೆಗಾಣದೆನ್ನ ಮನದ ತಲ್ಲಣಮಂ ಅವಂಗನಂತರಜಾತನಪ್ಪ ದೇವರಾಜನಿಂದು ತೀರ್ಚಿದಂ. ಇವನ ವಿನಯಮನಿವನ ವಿವೇಕಮನಿವನ ಪ್ರಜಾನುರಾಗಮಂ ಇವನ ಸೌಭ್ರಾತ್ರಮನಿವನ ಸ್ಥೈರ್ಯಧೈರ್ಯಶೌರ್ಯಾದಿಗುಣಂಗಳುಮಂ ನಿರವಿಸೆ, ಎಮ್ಮ ಪಿರಿಯ ಚಾಮರಾಜರಸ ನರಸರಾಜರಸ ಮುದುಪ ದೇವರಾಜರಸರ್ಗೆ ಸರಿಮಿಗಿಲೆನಿಸುಗುಂ. ಅದಱಿಂದಿವಂಗೆ ಪಿರಿಯರಸುತನಮನಿತ್ತು, ಇವನ ಮೆಯ್ಗಾಪಿನೊಳ್ ಇವನನುಜಾತನಪ್ಪ ಕುಱಿಯದೇವರಾಜರಸನಂ ನಿಯಮಿಸಿ, ಕಿಱಿಯರಸುತನಮಂ ಕುಮಾರಚಿಕದೇವರಾಯಂಗಮರಿಸಿ, ಇವನನುಜಂ ಕಂಠೀರವಯ್ಯರಸನಂ ಇವನ ಕಾಪಿನೊಳಿರಿಸಿ, ಆನುಂ ತೀರ್ಥಯಾತ್ರಾದಿ ತಪಸ್ಸಾಮ್ರಾಜ್ಯಮನನುಭವಿಪೆಂ." ಎಂಬುದಂ ಕೇಳ್ದು ಅಳಹಿಯಸಿಂಗರಾರ್ಯಂ ನುಡಿದಂ :—

"ಎಲೆ ಮಹಾರಾಯ ! ನೀನಿನ್ನುಂ ಪಲವುಂ ಬರಿಸಮರಸುಗೆಯ್ವುದೆ ಲೇಸು. ಆದೊಡಂ ಪಡಿನುಡಿಗುಡದೆ ಸಮ್ಮತಿಪುದೆಂದು ನಿರವಿಸಿ

ದುದಱಿಂದೊಡಂಬಟ್ಟು ನುಡಿವೆಂ. ನಿನ್ನನುಜಂ ದೇವರಾಜಂ ಮಹಾ ರಾಜಲಕ್ಷಣಸಂಪನ್ನನೆನಿಸಿ ನಳ ನಹುಷ ಯಯಾತಿ ದುಂಧುಮಾರ ಭಗೀ ರಥರಂ ದೊರೆಕೊಂಡು ಮತಿವಂತನುಮುತ್ಸಾಹಿಯುಂ ನೀತಿಶಾಸ್ತ್ರನಿಪುಣ ನುಂ ಸಕಲಧರ್ಮಜ್ಞನುಂ ದಯಾಳುವುಂ ದಾಕ್ಷಿಣ್ಯಪರನುಮೆಂದು ಸಕಲ ಪ್ರಜೆಗಳುಮಾನಂದಂಬಡೆವರ್. ಪ್ರಜಾನುರಾಗದಿಂದಮೆ ರಾಯರ್ಗೆ ಜಯಮುಂ ಜಸಮುಂ ಪಸರಿಸುಗುಂ. ಆದಱಿಂದೆ ದೇವರಾಜರಸಂಗೆ ಮಹಾರಾಜಪದಮನೀವುದೆ ಲೇಸು." ಎಂಬುದುಂ ;

ರಾಯನುಮತಿಹರ್ಷದಿಂ ಸುಮುಹೂರ್ತದೊಳ್ ಪಟ್ಟಾಭಿಷೇಕಂ ಗೆಯ್ದು ನುಡಿದಂ:—" ಎಲೆ ತಮ್ಮ ! ಯಾದವಮಹೀಶೂರವಂಶ ಕಲ ಶಾಂಬುಧಿಯೊಳ್ ಕಲಾಧರನಂತು ಉದಿಸಿದ್ದೈ. ತಣ್ಗದಿರ್ಗಳಂ ಪೋಲ್ವ ನಿನ್ನ ಗುಣಂಗಳಿಂದೆ ಅಖಿಲಪ್ರಜೆಗಳುಮಾಹ್ಲಾದಂಬಡೆದಿರ್ಪರ್. ಆನು ಮೆನ್ನ ಪೊಱೆಯಂ ನಿನ್ನೊಳಿಳಿಪಿದೆಂ. ಇನ್ನೆವರಮರಸುಗೆಯ್ದುದು ಮಿಂದು ಸರಸಮಾದುದು. ಸಕಲಶ್ರೇಯಂಗಳುಂ ಸಾರ್ದುವು. ಪುರಾ ಕೃತಪುಣ್ಯಫಲಂಗಳುಂ ಪೊಣ್ಮಿದುದು. ಕುಲದೇವತೆಗಳುಂ ಪ್ರಸನ್ನಮಾ ದುದು. ಅಕಟಕಟ ! ಪ್ರಜೆಗಳೇಂ ಸುಕೃತಶಾಲಿಗಳೋ : ಭದ್ರಗುಣಂಗ ಳಿಂ ರಾಮಭದ್ರನಂ ಪೋಲ್ವಿನಂ ಪರಿಪಾಲಿಸುವೈ. ಪೊಡವಿಯೇಂ ಪುಣ್ಯ ವತಿಯೋ : ಪೇರಾವೆಯೆಂಬ ಪಾಸಱೆಯೊಳಂ ದೆಸೆಯಾನೆಗಳ ಕುಂಭಂ ಗಳೆಂಬ ಗುಂಡುಗಲ್ಗಳೊಳಂ ಪಾವೆಱೆಯನ 'ಪೆಡೆವಣಿಗಳೆನಿಪ ಪೆಡ ಗಲ್ಲೊಳಂ ಜನ್ನವಂದಿಯ ಕೂಗೋರ್ಙರೆಯೊಳಂ ಕುಳ್ಳಿರ್ಪ ಕೋಟಲೆಯಂ ಮಱೆತು ನಿನ್ನ ದುಂಡುದೋಳೊಳ್ ನೆಲೆನೆಲಸಿ ಸೊಗಂಬಡೆದುದು. ನೀಂ ಸಕಲಶಾಸ್ತ್ರಂಗಳನೋದಿ ತಿಳಿಯುತಕ್ಕುವನಿತುಮಂ ತಿಳಿದಿರ್ಪೆ. ನಿನಗಾ ನುಪದೇಶಂಗೆಯ್ವುದೇನುಟಿದಿರ್ಪುದು ? ಆದೊಡಂ ಪ್ರೀತಿಯಿಂ ಪುನರು ಕ್ತಮೆನಿಸಿ ಪೇೞ್ವೆಂ. ಪಟ್ಟವಣೆಯೇಱುದುದರ್ಕೆ ಪುರುಳೊಂಬುದುಂ ಭೋಗಿಪುದುಮೇ ಫಲಮೆಂದೆಣಿಸದೆ ದೇವರಂ ಪಾರ್ವರಂ ಪೊರೆದವರ

ಸೇವೆಗೆಯ್ವುದುಂ, ಮಕ್ಕಳವೊಲ್ ಮಱುಕದಿಂ ಪ್ರಜೆಯುಂ ಕಾಪಿಡುವುದು ಮದಱಿಂ ಬರ್ಪ ಪುರುಳುಂ ಬಲ್ಪುಂ ಗೆಲ್ಲಮುಮದಱಿಂ ಬಳೆದ ದೇಶ ಕೋಶಂಗಳುಮದಱಿಂ ಬರ್ಪ ಕೀರ್ತಿಸುಕೃತಂಗಳುಮೋ ಫಲಮೆಂದೆಣಿಸು ವುದು.'' ಎಂದು ನಿರವಿಸಿ, ತನ್ನ ಕಿಱಿಯನುಜಂ ಮಱಿಯದೇವರಾಜ ರಸನಂ ತನ್ನಣುಗರಪ್ಪ ಚಿಕದೇವರಾಜ ಕಂಠೀರವರಾಜರುಮಂ ಕೆಯ್ಯೆಡೆ ಗೊಟ್ಟು, ತೆಂಕಣ ನಾಡೊಳ್ ಕೌಂಡಿನಿಯೆಂಬ ಪೊಱಿಯ ತಡಿಯೊಳ್ ಪಲವುಂ ಕಾಲಂ ತಪಂಗೆಯ್ದು ಪರವಾಸುದೇವನ ಪದಮಂ ಸಾರ್ದಂ.

---

## ದೇವರಾಜನ ಚರಿತಂ

ಬಱಿಕೀದೇವರಾಜಂ ಸಾಕ್ಷಾದ್ದೇವರಾಜನಂತೆ ಸುಧರ್ಮಾಧಿಷ್ಠಿ ತನುಂ। ಪಾವಕನಂತೆ ಶುಚಿಯುಂ ತೇಜಸ್ವಿಯುಂ। ಧರ್ಮರಾಜನಂತೆ ದಂಡಧರನುಂ ಸಮವರ್ತಿಯುಂ। ನಿರಋತಿಯಂತೆ ದೇವತಾಗಣಮಧ್ಯ ಗಣನೀಯನುಂ ಪುಣ್ಯಜನಾನುಯಾತನುಂ। ವರುಣನಂತೆ ಸತತಪ್ರತ್ಯಂ ಗನರ್ತಿತನಿಜಲಕ್ಷ್ಮೀಕನುಂ ಪ್ರಚೇತಸನುಂ। ಮಾರುತನಂತೆ ಜಗತ್ಪ್ರಾಣ ನುಂ ಪವಮಾನನುಂ। ಕುಬೇರನಂತೆ ರಾಜರಾಜನುಂ ಧನದನುಂ। ಈಶಾನ ನಂತೆ ಸರ್ವಜ್ಞನುಂ ಶಂಕರನುಮೆನಿಸಿ ನೆಗೞ್ಗುಂ. ಮತ್ತಂ ಪುರುಷೋ ತ್ತಮನವತರಣದ ಮತ್ಸ್ಯದಂತೆ ಪಟಿನುಡಿಗಳಂ ಪದುಳಂಗೊಳಿಸುವಂ। ಕೂರ್ಮನಂತೆ ಗೋತ್ರಮನೆತ್ತರಂಬಡಿಸುವಂ। ಮಹಾವರಾಹನಂತೆ ಪೊಡ ವಿಯುಂ ಪೊಗರೇಱಿಸುವಂ। ನೃಸಿಂಹನಂತೆ ಬಲ್ಪಗೆಗಳ ಎರ್ದೆಯನಿರ್ಬಗಿ ಗೆಯ್ವಂ। ವಾಮನನಂತೇಕಪದದೊಳೆ ಭೂಮಂಡಲಮನಿತುಮನಾಕ್ರಮಿ ಸುವಂ। ಭಾರ್ಗವನಂತೆ ದುಷ್ಟರಾಜನ್ಯರಂ ದೂರೀಕರಿಸುವಂ। ರಾಮ ಚಂದ್ರನಂತೆ ಧರ್ಮದಿಂ ರಾಜ್ಯಮನಾಳ್ವಂ। ಹಲಿಯಂತೆ ಬಲಭದ್ರನೆನಿ

ಸುವಂ। ಕೃಷ್ಣನಂತೆ ಧರ್ಮಪ್ರತಿಷ್ಠಾಪನಂಗೆಯ್ವಂ। ಕಲ್ಕಿಯಂತೆ ಪಾಷಂಡರಂ ಪರಿಹರಿಸುವಂ. ಮತ್ತಂ ತಾಂ ಪಲವುಂ ರಿಪುಪುರಂಗಳಂ ಜಯಿಸಿದುದಱಿಂ ಮುಪ್ಪೊಟಲಂ ಗೆಲ್ದ ಹರನಂ ಪರಿಹಾಸಂಗೆಯ್ವಂ। ತಾಂ ಶಕ್ತಿತ್ರಯಸಂಪನ್ನನಾದುದಱಿನೇಕಶಕ್ತಿಧರನಪ್ಪ ಕುಮಾರನಂ ಕಡೆಗಣಿಸುವಂ। ತಾನನವರತಪ್ರತಾಪಶಾಲಿಯಾದುದಱಿಂ ಪೊೞ್ತಂ ಗೊಂದು ತೇಜನಪ್ಪ ದಿವಾಕರನಂ ಧಿಕ್ಕರಿಸುವಂ। ತಾಂ ಸಕಲರತ್ನಂಗಳಂ ಸಂಗ್ರಹಿಸಿ ಅವಱಿಂ ಕಜ್ಜಂಗೊಳ್ವುದಱಿಂ ಜಡನಪ್ಪ ರತ್ನಾಕರನಂ ಜಱಿವಂ। ತಾಂ ತೇಜಸ್ವಿಯಾಗಿಯುಂ ಸನ್ಮಾರ್ಗಪ್ರವರ್ತಕನಾದುದಱಿಂ ಕೃಷ್ಣವರ್ತ್ಮನಪ್ಪಗ್ನಿಯನವಜ್ಞೆಗೆಯ್ವಂ। ತನ್ನವರನಿಬರುಮುಟ್ಟು ತೊಟ್ಟು ತನ್ನಂತಿರ್ಪುದಱಿಂ ಕೆಳೆಯೊರ್ವನಂ ಕಪಾಲಿಯುಂ ಕೃತ್ತಿವಾಸಿಯುಮೆನಿಸಿ ತೋಱಿಸುವ ಕುಬೇರನಂ ಕುತ್ಸೆಗೆಯ್ವಂ। ತಾಂ ಗೋತ್ರೋದ್ಧರಣಂಗೆಯ್ವುದಱಿಂ ಗೋತ್ರಾರಿಯಪ್ಪ ದೇವರಾಜನಂ ತೆಳ್ಪನೆನಿಸುವಂ। ತಾಂ ವ್ಯಸನಪರಾಙ್ಮುಖನಾದುದಱಿಂ ಪಗಡೆಯೊಳ್ ಪರಿಭವಂಬಡೆದ ನಳನನಿಱಿಕೆಗೆಯ್ವಂ। ತಾಂ ಸತ್ಯದೊಳ್ ಸಾರ್ವಭೌಮನಪ್ಪುದಱಿಂ ನನ್ನಿಯಿಂದಲುಗಿದ ಹರಿಶ್ಚಂದ್ರನಂ ಹೞಿವಂ। ತಾಂ ಸನಾತನಧರ್ಮಮಪ್ಪ ಕೃಷ್ಣನಂ ನಂಬಿ ನೆಲೆಗೊಂಡಿರ್ಪುದಱಿಂ ಧರ್ಮಾಂತರತತ್ಪರನಪ್ಪ ಅರ್ಜುನನಂ ತರ್ಜಿಸುವಂ. ಮತ್ತಂ ಶುಚಿಯಾಗಿಯುಂ ಪ್ರಜೆಗಳಂ ರಂಜಿಸುವಂ। ನಿರ್ಮಲನಾಗಿಯುಂ ವೈರಿಗಳ ಮುಖದೊಳ್ ಮಾಲಿನ್ಯಮಂ ಮಾೞ್ಪಂ। ನಿರ್ಭಯನಾಗಿಯುಂ ಮಲೆಪರ್ಗೆ ಭಯಮನೀವಂ। ಮಹೀಭೃತ್ತಾಗಿಯುಂ ಮೃದುಪ್ರಕೃತಿಯೆನಿಸುವಂ। ದಾನಪತಿಯಾಗಿಯುಂ ಮದರಹಿತನೆನಿಸುಗುಂ। ಸನ್ಮಾರ್ಗನಿರತನಾಗಿಯುಂ ಪರದುರ್ಗಾಕ್ರಮಣನಿಪುಣನಕ್ಕುಂ। ಘನಮಾಗಿಯುಂ ಅಚಂಚಲನಕ್ಕುಂ। ದೇವರಾಜನಾಗಿಯುಂ ನರಪತಿಯೆನಿಸಿ ನೆಗೞ್ಗುಂ.

ಇಂತಿರ್ಪ ಮಹಾರಾಯಂ ಧರೆಯಂ ಧರ್ಮದೊಳ್ ಪಾಲಿಪುದರ್ಕಂ

ಎಣ್ದೆಸೆಗಳಂ ಗೆಲ್ವುದರ್ಕಂ ನೆರವಾಗಿ ಮುಂ ಪಿರಿಯಣ್ಣಂ ಪೇಳ್ದಂತೆ ಚಿಕದೇವರಾಯನಂ ಯೌವರಾಜ್ಯದೊಳಲಂಕರಿಸಿದಂ.

## ಯುವರಾಜ ಚಿಕದೇವರಾಯನ ವಿಜಯಯಾತ್ರೆ

ಇವನುಮುಪೇಂದ್ರನಂತೆ ಅರಸುಗೆಯ್ಮೆಯ ಪೊಱೆಯನಿತುಮಂ ಪೊತ್ತು ಜೈತ್ರಯಾತ್ರೋತ್ಸವಂಗಳನೊಡರ್ಚುತಿರೆ; ರಾಯನುಂ ಮಹೇಂದ್ರನಂತೆ ನಿರ್ಭರನಾಗಿ ದಿವ್ಯಭೋಗಂಗಳನನುಭವಿಸುತ್ತಿರೆ ;

ಒರ್ಮೆ ಮಾನೋಮಿಯುಕ್ಕೆವದೊಳೆಣ್ದೆಸೆಯ ದೊರೆಗಳನಿಬರುಂ ಕಪ್ಪಕಾಣ್ಕೆಗಳಂ ತಂದೊಪ್ಪಿಸುವೆಡೆಯೊಳ್ ಇರ್ಕೇರಿಯೊಳ್ ಶಿವಪ್ಪನಾಯಕಂ ತನ್ನಾಳ್ದನಪ್ಪ ವೀರಭದ್ರನಾಯಕನೊಳ್ ದ್ರೋಹಮನೆಣಿಸಿ ಅವನಂ ಕವಡಿನೊಳ್ ಮಡುಪಿ ಆದೊರೆತನಮಂ ಕೊಂಡು ತಾನುಂ ಪಾವುಡಮುಂ ಕಾಣ್ಕೆಗಳಂ ಕಳುಪುವಿನಂ, ಅವನ ತಪ್ಪುಗೆಯ್ಮೆಗಳನೆಣಿಸಿ ನೀಟ್ಟಿರಿಸಿ, ಬಂದ ಗುಱಿನಾನಸನಂ ಬಂದಂತೆ ಕಳುಪಲೊಡಂ; ಅದರ್ಕಾದೊರೆ ಪಿರಿದುಂ ಬಿಗುರ್ತು ನೆರವನಱಸಿ ಮುಂ ತನ್ನಂತೆ ಬಿಜ್ಜಾನಗರಿಯ ದೊರೆತನಮನಾಳ್ದ ತೆಲುಂಗರಾಯರ ಬಗೆಯೊಳೊರ್ವಂ ಶ್ರೀರಂಗರಾಯನೆನಿಸುವಂ ತನ್ನ ಬೇಲೂರ್ ಚಂದ್ರಗಿರಿ ಮುಂತಾದ ಕೋಂಟೆದುರ್ಗಂಗಳಂ ತುರುಕರ್ಗೆ ಸೂಱೆಗೊಟ್ಟು ತನ್ನ ಪರಿಜನಂಬೆರಸು ಪಿರಿಯತಿರುಕುಳಿಯೆನಿಸಿ ಚೆಂಜಿ ತಂಜಾವೂರ್ಮಧುರೆಯ ಮನೆಗಳೊಳ್ ಎಱೆದು ಅವರಿತ್ತುದಂ ತುತ್ತಿಯವರಂ ಬೆಸ.....·...ಗಣೆಂದೆಟ್ಟಿತ್ತಲುಮತ್ತಲುಂ ಪರಿದು ಎತ್ತಲುಂ ನೆಲೆಗಾಣದಿರೆ ಯವನನಱಸಿ ಕಂಡು ಕಾಲ್ಗೆಱಗಿಯೊಡಗೊಂಡು ಬಂದು ತನ್ನ ಮುಂದಣ ಕಡೆಯ ಗಡಿಯೆನಿಸುವ ಹಾಸನಬೇಲೂರ್ಗಳನಿತ್ತು ನೆಲೆಗೊಳಿಸಿಯವನತ್ತಣಿಂದೆ ಐಗೂರು ತರಿಯಕೆರೆ ಹರಪನಹಳ್ಳಿ ಚಿಂತನಕಲ್ ಮಧಗಿರಿ ಗಿಡುಗ..ದ ಪಲವುಂ ಹಟ್ಟಿಕೊಟ್ಟದ ದೊರೆಗಳ ಬಲ

ವುಂ ತನ್ನ ಮೂಲಬಲವುಂ ತನ್ನಂ ಸೇಱಿದ ತುಳುವ ಕೊಂಕಣ ಕೊಡಗು ಮಲಯಾಳಂಗಳ ಮೂಲಬಲವುಂ ಕೊಂಡು ಪಟ್ಟಣಕ್ಕೆ ನಡೆತಂದು, * ........

————

* ಈಕಡೆ ಮುಗಿದಿಲ್ಲವೆಂದು ತೋರುತ್ತದೆ. ನಮಗೆ ದೊರೆತ ಮಾತೃಕೆಗಳಲ್ಲಿ ಗ್ರಂಥವು ಇಷ್ಟೇ ಇದೆ.